# ಧರ್ಮದೃಷ್ಟಿ











ಪ್ರಕಾಶಕರು

ನೂರು ಪುಸ್ತಕಗಳು

# ಧರ್ಮದೃಷ್ಟಿ



ಪಾಟೀಲ ಪುಟ್ಟಪ್ಪ



ಪ್ರಕಾಶಕರು

ನೂರು ಪುಸ್ತಕಗಳು

ಹುಬ್ಬಳ್ಳಿ

: : :

# ಮುನ್ನುಡಿ

ನನ್ನ ಮನಸ್ಸಿನ ಮೇಲೆ ವಿಶೇಷ ಬಗೆಯ ಪರಿಣಾಮವನ್ನು ಉಂಟು ಮಾಡಿದ ಹಲವು ವಿಚಾರಗಳನ್ನು ಸಂಗ್ರಹಿಸಿ ಇಲ್ಲಿ ಕೊಟ್ಟಿದ್ದೇನೆ. ಮಹಾ ಪುರುಷರ ಅನುಭವ ರಸಾಯನವನ್ನು ಸಾಧ್ಯವಾದಷ್ಟು ಕಲೆಹಾಕಿ ಕನ್ನಡ ಜನಕ್ಕೆ ಕೊಡಬೇಕೆನ್ನುವ ನನ್ನ ಬಹುದಿನದ ಬಯಕೆ ಫಲಪ್ರಾಪ್ತಿಯ ಸ್ಥಿತಿಗೆ ಬಂದಿರುವುದು ಸಂತೋಷದ ಸಂಗತಿಯಾಗಿದೆ. ಇದರೊಳಗಿನ ಕೆಲ ವಿಚಾರ ಗಳು, ನಾನು ಈ ಹಿಂದೆ "ವಿಶಾಲ ಕರ್ನಾಟಕ" ದಿನಪತ್ರಿಕೆಯನ್ನು ನಡೆಸು ತ್ತಿದ್ದಾಗ, ಆ ಪತ್ರಿಕೆಯಲ್ಲಿ ಈಗಾಗಲೇ ಪ್ರಕಟವಾಗಿವೆ. ಉಳಿದ ಅನೇಕ ವಿಚಾರಗಳು ಇದೀಗ ಬೆಳಕನ್ನು ಕಾಣತೊಡಗಿವೆ.

ಇವುಗಳ ಆಯ್ಕೆಯಲ್ಲಿ ನಾನು ಯಾವ ಒಂದು ನಿಶ್ಚಿತ ಕ್ರಮವನ್ನೂ ಅನುಸರಿಸಿಲ್ಲ. ನಾನು ಓದಿದ ಹಲವಾರು ಗ್ರಂಥಗಳಿಂದ, ನನ್ನ ಮನಸ್ಸಿಗೆ ಹಿಡಿದ ಕೆಲ ಭಾಗಗಳನ್ನು, ಇಲ್ಲಿ ಎತ್ತಿಕೊಂಡಿದ್ದೇನೆ. ಇವುಗಳಲ್ಲಿ ಕೆಲವು ಒಂದು ಸಮಗ್ರ ಗ್ರಂಥದ ತಿರುಳಾಗಿರಬಹುದು. ಇನ್ನು ಕೆಲವು ಹಲವಾರು ಅಧ್ಯಾಯಗಳ ಸಂಗ್ರಹ ರೂಪವಾಗಿರಬಹುದು. ಇಲ್ಲಿಯ ವಿಶಿಷ್ಟ ಪಾಠಗಳನ್ನೇ ಆಯಾ ಗ್ರಂಥಗಳಲ್ಲಿ ಒಂದೆಡೆಗೆ ಕಾಣಬೇಕೆಂದು ಪ್ರಯತ್ನ ಪಡುವವರು ಬಹುಶಃ ನಿರಾಸೆಗೊಳ್ಳಬೇಕಾಗಿ ಬರಬಹುದು. ನನಗೆ ಶಕ್ಯವಿದ್ದ ಮಟ್ಟಿಗೂ ಮೂಲದ ವಿಚಾರ ಸರಣಿಯನ್ನೂ ಭಾವಶುದ್ಧಿಯನ್ನೂ, ನಾನು ಇಲ್ಲಿ ಕಾಯ್ದುಕೊಂಡು ಬಂದಿದ್ದೇನೆ.

ಬಿದ್ದ ಜನಪದಕ್ಕೆ ಇಂದು ಜೀವನದ ಬಗ್ಗೆ ಹೊಸ ಆಸೆ, ಹೊಸ ಅಭಯ, ಹೊಸ ದರ್ಶನ ದೊರೆಯಬೇಕಾಗಿದೆ. ಸಣ್ಣವರ ಬಾಳು ದೊಡ್ಡದಾಗಬೇಕು. ದೊಡ್ಡವರ ಬಾಳು ವಿಸ್ತಾರಗೊಳ್ಳಬೇಕು. ವೈಯಕ್ತಿಕವಾದ ಆ ದೃಷ್ಟಿ ಈ ದೃಷ್ಟಿ ಮುಂತಾದ ಎಲ್ಲ ಬಗೆಯ ಸಂಕುಚಿತ ದೃಷ್ಟಿ ಅಳಿದು ಸಕಲ ರಲ್ಲಿಯೂ ವಿಶ್ವದ ಧರ್ಮದೃಷ್ಟಿ ಮೂಡಿಬರಬೇಕು. ಮಹಾತ್ಮಾಪುರುಷರ

ದರ್ಶನವನ್ನು ಪಡೆದು ಮನುಷ್ಯನು ತನ್ನ ಮನಸ್ಸಿನ ಅಲ್ಪತೆಯನ್ನು ನೀಗಿ ಹೊಸ ಜಗತ್ತಿನ ನಿರ್ಮಾಣಕ್ಕಾಗಿ ಈಗ ಹೆಣಗಬೇಕಾಗಿದೆ. ಸಕಲ ಜೀವಾತ್ಮರಿಗೂ ಲೇಸನ್ನು ಬಯಸುವ ಮನೋಭೂಮಿಕೆಯು ಇಂದು ಪ್ರತಿ ಮನುಷ್ಯನಲ್ಲಿಯೂ ಉಂಟಾಗಬೇಕು. ಅದನ್ನು ಉಂಟುಮಾಡುವ ಮಹಾ ಕಾರ್ಯದಲ್ಲಿ ಇದೊಂದು ಸಣ್ಣ ಪ್ರಯತ್ನವಾಗಿದೆ. ಇದನ್ನು ಓದಿದವರು " ಇಲ್ಲಿ ಬೆಳಕಿದೆ " ಎಂದು ಹೇಳುವರೆಂದು ನನಗೆ ಸಂಪೂರ್ಣ ಭರವಸೆ ಇದೆ.

ನಮ್ಮ ಶಿವಶರಣರ ಅನುಭವಾಮೃತವನ್ನೂ ಇದೇ ರೀತಿ ಇನ್ನೊಂದು ಪುಸ್ತಕದಲ್ಲಿ ಸಂಗ್ರಹಿಸಿ ಕನ್ನಡಿಗರಿಗೆ ಕೊಡಬೇಕೆಂದಿದ್ದೇನೆ. ಅದಕ್ಕೆ ಬೇಕಾದ ಅವಕಾಶ ಹಾಗೂ ಅನುಕೂಲತೆಗಳು ಲಭಿಸಿದಷ್ಟೂ ಶೀಘ್ರವಾಗಿ ಅದು ಪ್ರಕಟವಾಗುವುದು. ಕನ್ನಡಿಗರು ಅದನ್ನು ಪ್ರೀತಿಯಿಂದ ಬರಮಾಡಿ ಕೊಳ್ಳುವರೆಂದು ನಾನು ಹಾರಯಿಸಿದ್ದೇನೆ.

ಅತ್ಯಲ್ಪ ಅವಧಿಯಲ್ಲಿ ಈ ಸಂಗ್ರಹವನ್ನು ಮುದ್ದಾಗಿ ಮುದ್ರಿಸಿಕೊಟ್ಟ ಕೆಲಸಗಾರ ಬಂಧುಗಳಿಗೆ ನಾನು ಅತ್ಯಂತ ಕೃತಜ್ಞನಾಗಿದ್ದೇನೆ.

ಹುಬ್ಬಳ್ಳಿ

— ಪಾಟೀಲ ಪುಟ್ಟಪ್ಪ.

೨೫-೬-೧೯೪೯

# ಧರ್ಮದೃಷ್ಟಿ

## ಪ್ರಾರ್ಥನೆ

“ಸರ್ವ ಶಕ್ತನಾದ ಸೂರ್ಯ ದೇವನೇ! ನನ್ನ ಜನ ಸುಖದಲ್ಲಿ ಬದುಕಲೆಂದು ನಾನು ನಿನ್ನಲ್ಲಿ ಪ್ರಾರ್ಥಿಸುತ್ತಿದ್ದೇನೆ. ಚಳಿಮಳೆಯಲ್ಲಿ ಅವರು ಬದುಕಿ ಉಳಿಯಲಿ. ಅನೇಕ ಜನರು ಬೇನೆ ಬಳಲಿಕೆಗಳಿಗೆ ಬಲಿಯಾಗಿದ್ದಾರೆ. ನೀನು ಅವರನ್ನು ಕನಿಕರಿಸು. ಅವರು ಬದುಕುವಂತೆ ನಿನ್ನ ಅನುಗ್ರಹವಾಗಲಿ. ಜನವೆಲ್ಲ ಸುಖದ ತೆಪ್ಪದಲ್ಲಿ ತೇಲುವಂತೆ ನೀನು ಕೃಪೆ ದೋರು. ನಿನ್ನ ದಯೆಯಿಂದ ನಾಡಿನಲ್ಲೆಲ್ಲ ಸುಭಿಕ್ಷವಾಗಲಿ. ನಮ್ಮ ಪೂರ್ವಜರ ಮಾರ್ಗವನ್ನು ನಮಗೆ ಕರುಣಿಸು. ನಮ್ಮಿಂದ ತಪ್ಪು ಘಟಿಸಿದರೆ ನಮ್ಮ ಮೇಲೆ ನಿನ್ನ ಕನಿಕರವಿರಲಿ.”

“ತಾಯಿ ಭೂದೇವಿಯೇ, ನಿನ್ನ ಆಶ್ರಯ ಶಾಶ್ವತವಾಗುವಂತೆ ನಮ್ಮನ್ನು ಅನುಗ್ರಹಿಸು. ನಿನ್ನ ಒಲವನ್ನೇ ನಾವು ಅವಲಂಬಿಸಿದ್ದೇವೆ. ನಮ್ಮ ಗದ್ದೆ ಬೈಲುಗಳು ಬೆಳೆಯ ಬಂಗಾರವನ್ನು ಕೊಡುವಂತೆ ಹೊನ್ನು ಮಳೆಯು ಸುರಿಯಲಿ.”

“ಬೆಳಗಿನ ತಾರೆಯೇ, ನಮಗೆ ಶಾಂತಿಯನ್ನೂ ಸುಖ ನಿದ್ದೆಯನ್ನೂ ಕರುಣಿಸು.”

“ನಮ್ಮ ಮಕ್ಕಳಿಗೂ ಸ್ನೇಹಿತರಿಗೂ ಸಂದರ್ಶಕರಿಗೂ ಬಾಳು ಸುಖಮಯವಾಗುವಂತೆ, ಓ ಜಗತ್ತನ್ನು ಚಲಿಸುವ ಮಹಾಶಕ್ತಿಯೇ, ಹರಸು. ತಗ್ಗು ದಿನ್ನೆಗಳು ಸಮವಾಗಿ ನಮ್ಮ ಹಾದಿ ರಾಜ ಮಾರ್ಗವಾಗಲಿ. ದೀರ್ಘ ಕಾಲ ಬದುಕುವಂತೆ ದೊಡ್ಡ ಆಯುಷ್ಯ ನಮಗೆ ದೊರೆಯಲಿ. ನಿನ್ನ ಮಕ್ಕಳು ನಿರ್ಮಲಾಂತಃಕರಣದಿಂದ ಕೇಳುತ್ತಿರುವುದಕ್ಕೆ ತಾಯೆ, ನಿನ್ನ ಕೃಪೆಯ ಮುದ್ರೆ ಬೀಳಲಿ.”

— ಗ್ರೀಕರಿಂದ

# ಸೂರ್ಯೋದಯ

ಸೂರ್ಯೋದಯವಾಗುವುದನ್ನು ವರ್ಷದಲ್ಲಿ ಒಂದು ಸಲವಾದರೂ ನೋಡಿದವರು ನಮ್ಮಲ್ಲಿ ಎಷ್ಟು ಜನರಿದ್ದಾರೆ? ಬೆಳಗಿನ ವಿಚಾರವಾಗಿ ಅವರು ಏನೊಂದನ್ನೂ ಅರಿಯರು. ತಾವು ಪ್ರಥಮ ಚಹ ಸೇವಿಸುವ ಪೂರ್ವದಲ್ಲಿ ಬಂದುಹೋಗುವ ದಿನದ ಒಂದು ಭಾಗವೆಂದು ಅವರು ಪ್ರಾತಃ ಕಾಲವನ್ನು ಕುರಿತು ತಿಳಿದಂತಿದೆ. ಪ್ರಾತಃಕಾಲವು ಅವರಿಗೆ ಜೀವ ಧಾರಕವಾದ ಹೊಸ ಬೆಳಕಿನ ಸೂಚನೆಯಲ್ಲ. ಸೂರ್ಯ ದೇವನ ನೂತನ ಜನ್ಮೋತ್ಸವದ ಮಂಗಲ ಸಂಕೇತವಲ್ಲ. ಭೂಮ್ಯಾಕಾಶಗಳ ನಡುವೆ ತೂರಿಕೊಂಡಿರುವ ದೇವರ ಅಚ್ಚರಿಯ ಕೃತಿ ಕೌಶಲ್ಯವನ್ನು ನೋಡಲು ಉಂಟಾದ ಒಂದು ಹೊಸ ಅವಕಾಶ ಈ ಪ್ರಾತಃಕಾಲ ಎಂದು ಅವರು ತಿಳಿಯದವರಾಗಿದ್ದಾರೆ. ದಿನೋದಯವು ಅವರ ವಿಷಯದಲ್ಲಿ ಒಂದು ಯಾಂತ್ರಿಕ ಕ್ರಮವಾಗಿದೆ.

ದಿನದ ಪತ್ರಿಕೆಗಳನ್ನು ಓದಿ ಮಕ್ಕಳನ್ನು ಶಾಲೆಗೆ ಕಳಿಸಿ ತಮ್ಮ ದಿನದ ಕೆಲಸ ಊಟಗಳ ಬಗ್ಗೆ ಆಲೋಚನೆ ಮಾಡಿದರೇ ಅವರಿಗೆ ಸಾಕು ಬೇಕಾಗಿ ಹೋಗುತ್ತದೆ. ಪೂರ್ವದಿಗಂತದಲ್ಲಿ ಪ್ರಾತಃಕಾಲದ ಮೊದಲ ಬೆಳಕಿನೊಂದಿಗೆ ತೂರಿ ಬರುವ ಬಣ್ಣ ಬಣ್ಣದ ಓಕುಳಿಯನ್ನೂ, ಅದನ್ನು ಸ್ವಾಗತಿಸಲು ಸಪ್ತಮ ರಾಗದಲ್ಲಿ ಇಂಚರಗೈಯ್ಯುವ ಪಕ್ಷಿಸಂಕುಲದ ಮಧುರ ಗಾನವನ್ನೂ, ಆ ಗಾನದ ತಾನದಂತೆ ಪೂರ್ವ ದಿಗಂತವು ಕಿತ್ತಳೆ ಬಣ್ಣದಿಂದ ಕುದಿಯುವ ಕೆಂಪಿನ ವರ್ಣಕ್ಕೆ ತಿರುಗುತ್ತ ದಿನದ ಪ್ರತಿ-ನಿಧಿಯಾದ ಸೂರ್ಯ ದೇವನನ್ನು ಬರ ಮಾಡಿಕೊಳ್ಳುವುದನ್ನೂ ಅವರು ಕಾಣಲಾರರು. ಎಂತಲೇ ಆನಂದಗೊಳ್ಳಲಾರರು. ಕೋಟ್ಯಾವಧಿ ವರ್ಷಗಳಿಂದಲೂ ಸೂರ್ಯನು ಗೊತ್ತು ಮಾಡಿದ ಹೊತ್ತಿಗೆ ಉದಯವಾಗಿ ಬರುತ್ತಿದ್ದಾನೆ. ಆತನ ಬರುವಿಕೆಯಲ್ಲಿ ಆದಿ ಮಾನವನು ಅನುಭವಿಸಿದ ಆನಂದವನ್ನೇ ನಾವು ಈಗಲೂ ಅನುಭವಿಸಬಹುದು.

# ಸುಖ ಹೌದಲ್ಲವೇ ?

ನಾನು ಹತ್ತು ವರ್ಷಗಳಿಂದಲೂ ಕಾಣದ ನನ್ನ ಸ್ನೇಹಿತನೊಬ್ಬನು ಸೂರ್ಯನು ಅಸ್ತಮಿಸುವ ಕಾಲಕ್ಕೆ ಆಕಸ್ಮಿಕವಾಗಿ ಆಗಮಿಸುತ್ತಾನೆ. ಆತ ನನ್ನ ಬರಮಾಡಿಕೊಳ್ಳಲು ನಾನು ಬಾಗಿಲನ್ನೇನೋ ತೆರೆಯುತ್ತೇನೆ, ಆದರೆ ಕುಳಿತುಕೊಳ್ಳುವಂತೆ ಆತನಿಗೆ ಹೇಳುವ ವ್ಯವಧಾನ ನನ್ನಲ್ಲಿ ಇರುವುದಿಲ್ಲ. ಕೂಡಲೇ ನಾನು ಅಂತಃಪುರಕ್ಕೆ ಧಾವಿಸಿ ಹೆಂಡತಿಯನ್ನು ಕೇಳುತ್ತೇನೆ. "ಮನೆಯಲ್ಲಿ ಫಲಹಾರವೇನಾದರೂ ಇದೆಯೇ ?" ಎಂದು. ಆಗ ಅವಳು ನಗುನಗುತ್ತ ತನ್ನ ಕೊರಳೊಳಗಿನ ಬಂಗಾರದ ಎಳೆಯನ್ನು ತೆಗೆದು ನನ್ನ ಕೈಯಲ್ಲಿ ಇಡುತ್ತಾಳೆ. ಅದು ಸುಖ ಹೌದಲ್ಲವೇ ?

ಒಬ್ಬ ಬಡ ಪಂಡಿತನು ಸಾಲ ಕೇಳಲು ನನ್ನ ಬಳಿಗೆ ಬರುತ್ತಾನೆ. ಆದರೆ ನಾಚಿಕೆ ಬಂದು ಆತನಿಗೆ ಎದುರಾಗಿ ನಿಲ್ಲುತ್ತದೆ. ವಿಷಯಾಂತರಗೊಳ್ಳುತ್ತ ನಮ್ಮ ಮಾತು ಕತೆ ಹಾಗೆಯೇ ಸಾಗುತ್ತದೆ. ಆತನ ಅವಸ್ಥೆ ಅಂತೂ ನನ್ನ ಗಮನಕ್ಕೆ ಬರುತ್ತದೆ. ಅವನನ್ನು ಏಕಾಂತದಲ್ಲಿ ಕರೆದೊಯ್ದು ಆತನಿಗೆ ಎಷ್ಟು ಹಣ ಬೇಕೆಂಬುದನ್ನು ನಾನು ಕೇಳುತ್ತೇನೆ. ಆಮೇಲೆ ಒಳಗೆ ಹೋಗಿಬಂದು ಆ ಹಣವನ್ನು ಆತನ ಕೈಯಲ್ಲಿತ್ತು, "ನೀವು ಈಗಲೇ ಹೋಗಬೇಕೋ, ಇಲ್ಲವೆ ನನ್ನೊಂದಿಗೆ ಪಾನಕ ಕುಡಿದು ಹೋದರೆ ಆದೀತೋ" ಎಂದು ನಾನು ಆತನನ್ನು ಕೇಳುತ್ತೇನೆ. ಅದು ಸುಖ ಹೌದಲ್ಲವೇ ?

ಊಟವಾದ ನಂತರ ಮಾಡುವ ಕೆಲಸ ಏನೂ ಇಲ್ಲವೆಂದು ನಾನು ಹಳೆಯ ಪೆಟ್ಟಿಗೆಗಳನ್ನು ತೆರೆದು ಕಾಗದ ಪತ್ರಗಳನ್ನು ತಿರುವಿ ಹಾಕುವ ಪ್ರಯತ್ನದಲ್ಲಿರುತ್ತೇನೆ. ಅನೇಕ ಜನರ ಸಾಲಪತ್ರಗಳು ನನ್ನ ಕಣ್ಣಿಗೆ ಬೀಳುತ್ತವೆ. ಅವರಲ್ಲಿ ಕೆಲವರು ಸತ್ತಿದ್ದಾರೆ. ಇನ್ನು ಕೆಲವರು ಬದುಕಿದ್ದಾರೆ. ಏನೆಂದರೂ ನಮ್ಮ ಮನೆತನದ ಹಣ ಮಾತ್ರ ಬರುವಂತಿಲ್ಲ. ಯಾರಿಗೂ ತಿಳಿಯದಂತೆ ನಾನು ಅವುಗಳನ್ನೆಲ್ಲ ರಾಶಿ ಹಾಕಿ ಹೋಳಿಮಾಡಿಬಿಡುತ್ತೇನೆ. ಆ ಹೊಗೆ ಆಕಾಶದಲ್ಲಿ ಲೀನವಾಗಿ ಬಿಡುತ್ತದೆ. ಅದು ಸುಖ ಹೌದಲ್ಲವೇ ?

— ಲಿನ್ ಯುಟಾಂಗ

# ಮುಕ್ತಿಯ ಹಾದಿ

ಮನಸ್ಸಿನ ಶಾಂತಿಯನ್ನು ಕಳೆದುಕೊಂಡ ಯುವಕನೊಬ್ಬನು ನನ್ನ ಬಳಿಗೆ ಬಂದು ಕೇಳಿದ: " ಸ್ವಾಮೀಜಿ, ಧ್ಯಾನಮಾಡುವುದಕ್ಕೆ ಬೇಕಾದ ಮನಸ್ಸಿನ ಸಮಾಧಾನ ನನ್ನಲ್ಲಿ ಇಲ್ಲದಾಗಿದೆ. ಬಾಗಿಲ ಕದವನ್ನು ಇಕ್ಕಿ ಬಂದು ಕಣ್ಣನ್ನು ಮುಚ್ಚಿ ಕುಳಿತರೂ ನನ್ನ ಮನಸ್ಸಿಗೆ ನಿಗ್ರಹ ಬರಲೊಲ್ಲದು."

ಆ ಮಾತನ್ನು ಕೇಳಿದೊಡನೆಯೇ ನಾನು ಮಾರುತ್ತರ ಕೊಟ್ಟೆ: " ತರುಣನೇ, ಕೊಟ್ಟಡಿಯಲ್ಲಿ ಕದಮುಚ್ಚಿಕೊಂಡು ಕುಳಿತುಕೊಂಡಿರಲು ನಿನಗೆ ಏನು ಅಧಿಕಾರವಿದೆ? ದೇಶಕ್ಕೆ ದೇಶವೇ ಬರದಿಂದ ಬಳಲುತ್ತ ನೋವು ನರಳಿಕೆಯಲ್ಲಿರುವಾಗ ಮನೆಯ ಮೂಲೆಯನ್ನು ನೀನು ಆಶ್ರಯಿಸುವೆಯಾ? ನಿನ್ನ ಕಣ್ಣು ಹಾಗೂ ಹೃದಯಗಳನ್ನು ತೆರೆದು ಬಡವರ ಗೋಳನ್ನಷ್ಟು ನೋಡು. ನಿನ್ನ ಮುಕ್ತಿಯ ಹಾದಿ ನಿನಗೆ ಅಲ್ಲಿ ಗೋಚರವಾಗುತ್ತದೆ.

— ಸ್ವಾಮಿ ವಿವೇಕಾನಂದ

# ವಿಜಯುದ ಸಂದೇಶ

ಈ ಐಕ್ಯವು ನಮ್ಮ ಜೀವನದ ರಕ್ಷಾಕವಚ. ಅದರಿಂದಲೇ ನಮಗೆ ಧೈರ್ಯ. ಅದರಿಂದಲೇ ನಮಗೆ ಜಯ. ಈ ಐಕ್ಯದಲ್ಲಿ ಮಾಧುರ್ಯವೊಂದೇ ಇಲ್ಲ. ಅದರಲ್ಲಿ ಜಾಜ್ವಲ್ಯಮಾನವಾಗಿ ಬೆಳಗುವ ದೀಪ್ತಿಯ ಪ್ರಖರತೆಯೂ ಇದೆ. ಸಂತೃಪ್ತಿಗೊಂದೇ ಅಲ್ಲದೆ ಶಕ್ತಿಗೂ ಅದೇ ಆಶ್ರಯಸ್ಥಾನವಾಗಿದೆ. ನಮ್ಮ ಕಣ್ಣೆದುರು ಮೂಡಿ ನಿಂತಿರುವ ನಮ್ಮ ನಾಡಿನ ರಾಷ್ಟ್ರೀಯತೆಯು ಯಾವನೊಬ್ಬ ದೊರೆಯ ಕೃಪೆ ಅಥವಾ ಅವ–ಕೃಪೆಯಿಂದ ಬಂದ ಪ್ರಸಾದವಲ್ಲ. ಒಂದು ಶಾಸನವು ಸ್ವೀಕೃತವಾಗಲಿ ಅಥವಾ ಆಗದೇ ಇರಲಿ, ಇಂಗ್ಲಂಡದ ಜನ ನಮ್ಮ ಆರ್ತನಾದವನ್ನು ಕೇಳಲಿ ಅಥವಾ ಕೇಳದೇ ಇರಲಿ, ನಮ್ಮ ದೇಶವು ಎಂದೆಂದಿಗೂ ನಮ್ಮ ದೇಶವಾಗಿಯೇ ಉಳಿಯುತ್ತದೆ. ಇದು ನಮ್ಮ ತಂದೆ ತಾಯಿಗಳ ನಾಡು; ನಮ್ಮ ಮಕ್ಕಳು ಮರಿಗಳ ನಾಡು; ನಮಗೆ ಶಕ್ತಿಯನ್ನೂ, ಕ್ಷೇಮವನ್ನೂ, ಜೀವನವನ್ನೂ ಒದಗಿಸುವ ನಾಡು. ದೇವರ ದಯೆಯಿಂದ ನಮಗಿಂದು ತಿಳಿವಳಿಕೆ ಪ್ರಾಪ್ತವಾಗಿದೆ. ಐಕ್ಯದಲ್ಲಿಯೇ ವಿಜಯವಿದೆಯೆಂದು ನಾವು ಮನಗಾಣತೊಡಗಿದ್ದೇವೆ. ಪುನರುಜ್ಜೀವನದ ಬಗೆಗೆ ಯೋಚನೆಯನ್ನೇ ಮಾಡದ ಆ ಹಳೆಯ ದಿನಗಳ ನೆನಹು ಇಲ್ಲಿಗೇ ಮುಗಿದು ಹೋಗಲಿ.

— ರವೀಂದ್ರನಾಥ ಠಾಕೂರ

# ಆದರ್ಶಕ್ಕೆ ಅರಿಕೆ

ಜನತೆಯನ್ನು ಕಾರ್ಯೋನ್ಮುಖರನ್ನಾಗಿ ಮಾಡಲು ನೀನು ಅವರೊಳಗಿನ ಯಾವ ಶಕ್ತಿಗೆ ಅರಿಕೆ ಮಾಡಿಕೊಳ್ಳುವೆ? ಸ್ವಾರ್ಥವೇ, ಶ್ರೀಮಂತಿಕೆಯೇ-ಯಾವುದು? ಇವುಗಳಲ್ಲಿ ಯಾವುದೊಂದೂ ಜನತೆಯನ್ನು ಜಾಗೃತಗೊಳಿಸುವುದಿಲ್ಲ. ಅವರೊಳಗಿನ ಸ್ವಾತಂತ್ರ್ಯಾಭಿಮಾನವನ್ನೂ, ಸ್ವಾನುಭೂತಿಯನ್ನೂ ಸ್ವಲ್ಪ ಕೆರಳಿಸಿ ನೋಡು. ಕಣ್ಣು ಮುಚ್ಚಿ ಕಣ್ಣು ತೆರೆಯುವುದರೊಳಗೆ ಆಗ ಎಂಥ ಅದ್ಭುತಗಳು ನಡೆದುಹೋಗುತ್ತವೆ! ಸ್ವಾರ್ಥದಲ್ಲಿಯೂ ಸಾಮರ್ಥ್ಯವಿದೆಯೆಂದರೂ ಅದು ಯಾಂತ್ರಿಕ ಶಕ್ತಿ. ಹಿಡಿದು-ತಂದ ನಾಯಿ ಮೊಲವನ್ನು ಹಿಡಿಯಲಾರದು. ಆದರೆ ಮಾನವ ಸ್ವಭಾವದಲ್ಲಿ ರಸಾಯನಿಕ ಶಕ್ತಿಗೆ ಹೋಲಿಕೆಯಾಗಬಲ್ಲ ಒಂದು ಅಗಾಧ ಶಕ್ತಿ ಇದೆ. ಅದು ಎಲ್ಲವನ್ನೂ ಮಣಿಸಿ ತನ್ನ ಆಧೀನಕ್ಕೆ ಒಳಪಡಿಸಿಕೊಂಡು ಬಿಡುವುದು. ಅದಕ್ಕೆ ಯಾವುದೂ ಅಸಾಧ್ಯವಲ್ಲ.

ಏನೇ ಹೇಳಿದರೂ ತನ್ನ ಬಳಿ ಇದ್ದುದೆಲ್ಲವನ್ನೂ ಮನುಷ್ಯನು ಇನ್ನೊಬ್ಬನ ಜೀವನಕ್ಕಾಗಿ ಸಾಮಾನ್ಯವಾಗಿ ಕೊಡಲಾರ. ಆದರೆ ಉಚ್ಚ ಆದರ್ಶಗಳ ಪ್ರಶ್ನೆ ಬಂದಾಗ ಆತನು ತನ್ನ ಜೀವನವನ್ನೇ ಬಲಿಕೊಡಬಲ್ಲನು. ಸ್ವಾರ್ಥವಿರುವ ಸಮಾಜದಲ್ಲಿ ವೀರ ಪುರುಷರ ಅವತಾರವಾಗುವುದಿಲ್ಲ. ಪ್ರಪಂಚದ ಚರಿತ್ರೆಯಲ್ಲಿ ಕಣ್ಣು ಕುಕ್ಕಿಸುವ ಬೆಳಕನ್ನು ಚೆಲ್ಲಿದವರು ಸ್ವಾರ್ಥದಿಂದ ಬಂದವರಲ್ಲ. ಗೌತಮನ ರಾಜ್ಯತ್ಯಾಗವೂ ಅಶೋಕನ ಅಹಿಂಸಾಬೋಧೆಯೂ ಸ್ವಾರ್ಥಮೂಲವಾದವುಗಳಲ್ಲ. ಸ್ವಾರ್ಥವನ್ನು ತಲೆಮೆಟ್ಟಿಸುವಂಥ ಶಕ್ತಿಯೊಂದಿದೆ. ಅದನ್ನು ಧರ್ಮ, ಸ್ವಾನುಭೂತಿ, ಸ್ವಾತಂತ್ರ್ಯಾಭಿಮಾನ, ಮಾನವೀಯ-ಉತ್ಸುಕತೆ ಎಂದು ಬೇಕಾದ ಹೆಸರಿನಿಂದ ಕರೆಯಿರಿ. ಅದು ನೈತಿಕ ಜಗತ್ತಿನ ವಿದ್ಯುಚ್ಛಕ್ತಿ! ಜನ ಸಾಮಾನ್ಯರ ಕತ್ತಲೆಯ ಗವಿಗಳಲ್ಲಿ ಆ ಬೆಳಕು ಕಾಣಬರತೊಡಗಿದೆ. ಅದನ್ನು ಕಾಣದವನು ಕಣ್ಣು ಮುಚ್ಚಿ ನಡೆಯುತ್ತಿದ್ದಾನೆಂದು ಹೇಳಬೇಕು. "ನೋಡುವವನು ಕಾಣುತ್ತಾನೆ" ಎಂದು ಪ್ಲುಟಾರ್ಕ ಹೇಳುತ್ತಾನೆ. ಆತ್ಮಕ್ಕೆ ಅನುಕಂಪದ ತತ್ತ್ವವಿದೆ. ಮನುಷ್ಯನು ಹುಟ್ಟಿರುವುದು ಪ್ರೀತಿಸುವುದಕ್ಕೆ, ನೆನೆದುಕೊಳ್ಳುವುದಕ್ಕೆ, ವಿಚಾರ ಮಾಡುವುದಕ್ಕೆ, ಅದರಂತೆ ಭವಿಷತ್ತನ್ನು ಅರಿಯುವುದಕ್ಕೆ!

— ಹೆನ್ರಿ ಜಾರ್ಜ

# ಸತತೋದ್ಯೋಗ

ನಾವು ವಿಸ್ಮಯಗೊಳ್ಳುವಂಥ ಘಟನೆಯಾಗಲಿ ಅಥವಾ ಸಮ್ಮ ಸ್ತುತಿಗೆ ಪಾತ್ರವಾಗುವಂಥ ಕಾರ್ಯವಾಗಲಿ ನಿರಂತರವೂ ಪರಿಶ್ರಮ ಪಡುವಂಥ ನಮ್ಮೊಳಗಿನ ಅಜೇಯ್ಯ ಶಕ್ತಿಯ ಫಲವೆಂದು, ಪರಿಣಾಮವೆಂದು ಹೇಳ ಬಹುದು. ದಮನಗೊಳ್ಳದ ಅಂಥ ಶಕ್ತಿಯೇ ತಗ್ಗು ನೆಲದಲ್ಲಿ ಗುಡ್ಡದೆತ್ತರದ ಗೊಮ್ಮಟೇಶ್ವರನನ್ನು ನಿರ್ಮಿಸಬಲ್ಲದು. ದೂರ ದೂರದ ದೇಶಗಳಲ್ಲಿ ಅರಿಯದ ಅಪರಿಚಿತರಂತೆ ಇರುವ ಜನರನ್ನು, ಸಮುದ್ರಕ್ಕೆ ಕಾಲುವೆ ಕೊರೆ ದಾದರೂ ಸಮೀಪಕ್ಕೆ ತರಬಲ್ಲದು. ಕೊಡಲಿಯ ಮೊದಲ ಹೊಡೆತ ಹಾಗೂ ಕೊನೆಯ ಪರಿಣಾಮಗಳ ನಡುವೆ ಎರಡು ಜಗತ್ತಿನ ಅಂತರವಿದೆ. ಮೊದಲ ಪೆಟ್ಟು ಗಿಡದಲ್ಲಿ ಒಂದು ಚಿಕ್ಕ ಗೆರೆಯನ್ನು ಕೊರೆಯಬಹುದು. ಆದರೆ ಕೊನೆಯ ಪೆಟ್ಟು ಗಿಡವನ್ನು ಉರುಳಿಸಿ ಬುಡಮೇಲು ಮಾಡಿರುತ್ತದೆ. ಇಂಥ ಸಣ್ಣ ಪ್ರಯತ್ನಗಳನ್ನೇ ಬಿಟ್ಟೂ ಬಿಡದೆ ಒಂದೇ ಸವನೆ ಮುಂದುವರಿಸಿದರೆ ಕಾಲಕ್ರಮದಲ್ಲಿ ಎಂಥ ಆತಂಕವೂ ಅಗಾಧವಾಗಿ ಉಳಿಯುವುದಿಲ್ಲ. ಎತ್ತ ರದ ಪರ್ವತಗಳನ್ನು ನೆಲಸಮ ಮಾಡುವುದೂ, ದೂರದ ಸಮುದ್ರಗಳನ್ನು ಹತ್ತಿರಕ್ಕೆ ತರುವುದೂ ಮಾನವನ ಅಲ್ಪ ಪ್ರಯತ್ನವೇ ಎಂದು ಹೇಳಿದರೆ ಅನೇಕರಿಗೆ ಅಚ್ಚರಿಯಾಗಿ ತೋರಬಹುದು. ಆದರೆ ಅದು ಅನಿವಾರ್ಯವಾದ ಸತ್ಯ. ನಿರಂತರವಾದ ಮಳೆಯಿಂದ ವಜ್ರ ಶಿಲೆಯೂ ಕರಗಿ ಹೋಗುವು ದಿಲ್ಲವೇ ? ಕಟ್ಟದ ಆಣೆಕಟ್ಟನ್ನು ದಿನ ದಿನವೂ ಸ್ವಲ್ಪ ಸ್ವಲ್ಪ ಕೊರೆಯುತ್ತ ಇಲಿಯಂಥ ಒಂದು ಕ್ಷುದ್ರಪ್ರಾಣಿಯು ಒಂದು ರಾಷ್ಟ್ರವನ್ನೇ ನೀರುಪಾಲು ಮಾಡಿಬಿಡಬಹುದು.

— "ಅವಿಸ್ಮರಣೀಯ ವಿಚಾರ''ದಿಂದ

# ಪರಿಪೂರ್ಣತೆ

ನಿಷ್ಠೆಯಲ್ಲಿ ಗಟ್ಟಿಯಾದರೂ ಪರಿಜ್ಞಾನದಲ್ಲಿ ಯಾರು ದುರ್ಬಲರಾಗಿರುತ್ತಾರೆಯೋ ಅವರು ಕೆಲಸಕ್ಕೆ ಬಾರದ ಅಯೋಗ್ಯ ಜನರಲ್ಲಿ ವಿಶ್ವಾಸವನ್ನು ತಾಳಿಕೊಂಡು ತಪ್ಪುಗುರಿಯ ಸಾಧನೆಯಲ್ಲಿ ಆಸಕ್ತಿ ತೋರುತ್ತಾರೆ. ಪರಿಜ್ಞಾನದಲ್ಲಿ ಗಟ್ಟಿಯಾದರೂ ನಿಷ್ಠೆಯಲ್ಲಿ ಯಾರು ದುರ್ಬಲರಾಗಿರುತ್ತಾರೆಯೋ ಅವರು ಅಪ್ರಾಮಾಣಿಕತೆಯ ಕಡೆಗೆ ಮನಸ್ಸನ್ನು ಸಡಿಲು ಬಿಟ್ಟು ಸಾಗುತ್ತಾರೆ. ಔಷಧದಿಂದ ಉಂಟಾದ ರೋಗವನ್ನು ಪರಿಹರಿಸುವುದು ಅಶಕ್ಯವಾದಂತೆ ಅಂಥವರನ್ನು ಹಾದಿಗೆ ತರುವುದೂ ಅಶಕ್ಯವಾಗುತ್ತದೆ. ನಿಷ್ಠೆ ಹಾಗೂ ಪರಿಜ್ಞಾನಗಳು ಯಾರಲ್ಲಿ ಸಮತೋಲವಾಗಿ ಇರುವವೋ ಅಂಥವರು ಮಾತ್ರ ಯೋಗ್ಯ ಗುರಿಯಲ್ಲಿ ನಂಬಿಗೆಯನ್ನಿರಿಸಿ ನಡೆಯಬಲ್ಲರು.

ಏಕಾಗ್ರತೆಯಲ್ಲಿ ಬಲವಾಗಿದ್ದರೂ ಉತ್ಸಾಹದಲ್ಲಿ ಯಾರು ದುರ್ಬಲರಾಗಿರುವರೋ ಅಂಥವರನ್ನು ಆಲಸ್ಯತನ ಬಂದು ಆವರಿಸಿಕೊಳ್ಳುತ್ತದೆ. ಉತ್ಸಾಹದಿಂದೊಡಗೂಡಿದ ಏಕಾಗ್ರತೆಯು ಆಲಸ್ಯತನದ ಸ್ವರೂಪವನ್ನೇ ಧಾರಣ ಮಾಡುತ್ತದೆ. ಉತ್ಸಾಹದಲ್ಲಿ ಬಲವಾಗಿದ್ದರೂ ಏಕಾಗ್ರತೆಯಲ್ಲಿ ಯಾರು ದುರ್ಬಲರಾಗಿರುವರೋ ಅಂಥವರನ್ನು ಚಿತ್ತ ಚಾಂಚಲ್ಯ ಬಂದು ಆವರಿಸಿಕೊಳ್ಳುತ್ತದೆ. ಏಕಾಗ್ರತೆಯಿಂದ ಕೂಡದ ಉತ್ಸಾಹವು ಚಿತ್ತ ಚಾಂಚಲ್ಯದಲ್ಲಿ ಪರಿಣಮಿಸುತ್ತದೆ. ಉತ್ಸಾಹ ಮತ್ತು ಏಕಾಗ್ರತೆ ಸಮಗೊಂಡಾಗ ಧ್ಯಾನ ಹಾಗೂ ತನ್ಮಯತೆ ಉಂಟಾಗುವುದು.

ಸರ್ವ ನಿರ್ಧಾರಗಳಿಗೂ ಮಾನಸಿಕ ಸ್ಥೈರ್ಯವೇ ಮುಖ್ಯ. ಆ ಸ್ಥೈರ್ಯವಿದ್ದರೆ ಚಿತ್ತಚಾಂಚಲ್ಯಕ್ಕೆ ಅವಕಾಶವುಂಟಾಗಲಾರದು. ಮಾನಸಿಕ ಸ್ಥೈರ್ಯವಿದ್ದಲ್ಲಿ ಆಲಸ್ಯತನದ ಅವಶೇಷ ಕೂಡ ಉಳಿಯುವುದಿಲ್ಲ.

— ಬುದ್ಧಘೋಷ

# ತನಗೆ ತಾನೇ ಬೆಳಕು

ಎಲ್ಲ ವಸ್ತುಗಳಲ್ಲಿಯೂ ವಿನಾಶ ಹುದುಗಿಕೊಂಡಿದೆ. ಜಾಣ್ಮೆಯಿಂದ ಕೆಲಸ ಮಾಡಿ ನಿನ್ನ ಮುಕ್ತಿಯನ್ನು ಸಾಧಿಸಿಕೋ. ನೀನೇ ನಿನ್ನ ಬೆಳಕಾಗು. ನಿನ್ನನ್ನು ನೀನೇ ಆಶ್ರಯಿಸು. ಬೇರೊಬ್ಬರನ್ನು ಆಶ್ರಯಿಸುವ ವಿಚಾರ ಬಿಟ್ಟುಬಿಡು. ಎಂದೆಂದಿಗೂ ಸತ್ಯಕ್ಕೇ ಅಂಟಿಕೋ. ಸತ್ಯವೇ ನಿನ್ನ ದಾರಿಯ ದೀಪವಾಗಲಿ. ಎಂಥ ಪ್ರಸಂಗದಲ್ಲಿಯೂ ಸತ್ಯಪಥದಿಂದ ವಿಮುಖನಾಗಬೇಡ. ಪರರಿಂದ ಮಾರ್ಗದರ್ಶನ ಬರಬೇಕೆಂದು ಅಪೇಕ್ಷಿಸಬೇಡ. ನಿನಗೆ ನೀನೇ ಮಾರ್ಗದರ್ಶಕನಾಗಬೇಕು. ಈ ರೀತಿ ನಡೆದುಕೊಂಡರೆ ಯಾರೂ ಏರದಂಥ ಉನ್ನತಿಗೆ ನೀನು ಏರಿ ಹೋಗಬಲ್ಲೆ. ಸಾಧನೆಯ ಕಳಕಳಿ ಹಾಗೂ ಕುತೂಹಲ ಮಾತ್ರ ನಿನ್ನಲ್ಲಿ ಉಂಟಾಗಲಿ. ಆ ಸಾಧನೆಯ ಅವಸ್ಥೆಯನ್ನು ದಾಟಿದವರು ಮನುಷ್ಯಕುಲವನ್ನು ಉದ್ಧರಿಸಬಲ್ಲರು. ಜಗತ್ತಿನಲ್ಲಿ ಹುದುಗಿರುವ ದುಃಖವನ್ನು ಕುರಿತು ಅವರು ಸಂತತವೂ ಚಿಂತಿಸುತ್ತಾರೆ. ಆ ಮೂಲಕ ಅದನ್ನು ನಿವಾರಣೆ ಮಾಡುವ ಹಾದಿಯನ್ನೂ ಕಂಡು ಹಿಡಿಯುತ್ತಾರೆ.

ಪಾಪ ವಿಮುಕ್ತಿಯನ್ನು ಪಡೆಯಲು ಪ್ರತಿಯೊಬ್ಬ ವ್ಯಕ್ತಿಗೂ ಸಾಧ್ಯವಿದೆ. ತನಗೆ ತಾನು ಬೆಳಕಾಗಬೇಕೆನ್ನುವ ತಿಳಿವಳಿಕೆ ಮನುಷ್ಯನಲ್ಲಿ ಬಂದಾಗ ಮುಕ್ತಿ ಆತನನ್ನು ಹುಡುಕಿಕೊಂಡು ಬರುತ್ತದೆ.

— ಬುದ್ಧ

ಎಷ್ಟೇ ತತ್ವವನ್ನು ಹೇಳಿದರೂ, ಅನೇಕಾನೇಕ ದೇವರನ್ನು ಪೂಜಿಸಿದರೂ, ಅನಂತಕರ್ಮಗಳನ್ನು ಆಚರಿಸಿದರೂ, ಅಸಂಖ್ಯ ಭಕ್ತಿಯ ಪದಗಳನ್ನು ಹಾಡಿದರೂ, ನಿನಗೆ ನೂರು ಯುಗಗಳ ಆಚೆಗೂ ಮುಕ್ತಿ ದೊರೆಯಲಾರದು. ಆತ್ಮದ ದರ್ಶನವಿಲ್ಲದೆ ಯಾವ ಸಾಕ್ಷಾತ್ಕಾರವೂ ಇಲ್ಲ.

— ಶಂಕರ

# ನೀತಿ ಜೀವನ

ನಿನ್ನ ಸುತ್ತುಮುತ್ತಲೂ ಇರುವವರೆಲ್ಲ ನೀತಿ ನಿಷ್ಠೆಯನ್ನು ಕಳೆದುಕೊಂಡು ಶ್ರೀಮಂತರಾದರೆ ಆಗಲಿ. ನೀನು ಮಾತ್ರ ಬಡವನಾಗಿಯೇ ಇರು. ಉಳಿದವರು ಮಿಥ್ಯಾಚಾರದಿಂದ ಮೇಲೆ ಹೋದರೂ ಹೋಗಲಿ. ನೀನು ಮಾತ್ರ ಅಂಥ ಯಾವ ಸ್ಥಾನಮಾನಕ್ಕೂ ಹಂಬಲ ಪಡಬೇಡ. ಇತರರು ಸ್ತುತಿಯ ಮೂಲಕ ತಮ್ಮ ಕಾರ್ಯಸಾಧನೆ ಮಾಡಿಕೊಂಡರೂ ಚಿಂತೆಯಿಲ್ಲ. ನೀನು ಮಾತ್ರ ನಿನ್ನ ನಿರಾಸೆಗಳನ್ನೆಲ್ಲ ಸಹನಶೀಲನಾಗಿ ನುಂಗಿಕೋ. ಅನೇಕ ಅಸಹ್ಯ ಅವಹೇಳನಗಳನ್ನು ಸಹಿಸಿಯೂ ಅನ್ಯರು ಅಪೇಕ್ಷಿಸುವ ಆ ದೊಡ್ಡವರ ಹಸ್ತಾಂದೋಲನದ ಬಗ್ಗೆ ನಿನಗೆ ಮೋಹ ಬೇಡ. ನಿನ್ನ ನೀತಿಯೇ ನಿನ್ನ ಕವಚವಾಗಲಿ. ಒಬ್ಬ ಸ್ನೇಹಿತನನ್ನು, ಒಂದು ತುಣುಕು ರೊಟ್ಟಿಯನ್ನು ನೀನು ಪಡೆದರೆ ಸಾಕು. ನಿನಗೆ ಈ ದಾರಿಯಿಂದ ಗೌರವ ದೊರೆಯದೆ ವೃದ್ಧಾಪ್ಯ ಬಂದರೂ ಚಿಂತೆಯಿಲ್ಲ. ದೇವರ ವರದ ಹಸ್ತ ಮಾತ್ರ ನಿನ್ನತಲೆಯ ಮೇಲೆ ಸರ್ವದಾ ಇರುತ್ತದೆ.

— ಕನ್‌ಫ್ಯೂಷಿಯಸ್

# ಆತ್ಮೀಯ ಸ್ನೇಹಿತರು

ಈ ಜಗತ್ತಿನಲ್ಲಿ ಮನುಷ್ಯನಿಗೆ ವಿಶ್ರಾಂತಿಯೇ ಎಲ್ಲಕ್ಕೂ ಹೆಚ್ಚು ಪ್ರಿಯವಾದುದು. ವಿಶ್ರಾಂತಿಯೆಂದರೆ ಕೆಲಸ ಮಾಡದೆ ಸುಮ್ಮನಿರುವುದು ಎಂದರ್ಥವಲ್ಲ. ಓದಲು, ಬರೆಯಲು, ಸ್ನೇಹಸಂವರ್ಧನೆ ಮಾಡಿಕೊಳ್ಳಲು, ಮಹತ್ವದ ಸ್ಥಳಗಳನ್ನು ಸಂದರ್ಶಿಸಲು ವಿಶ್ರಾಂತಿಯು ಅವಕಾಶವನ್ನು ಕಲ್ಪಿಸಿ ಕೊಡುತ್ತದೆ. ಇವುಗಳಿಗಿಂತ ಹೆಚ್ಚಿನ ಸುಖ ಈ ಪ್ರಪಂಚದಲ್ಲಿ ಯಾವುದಿದ್ದೀತು ?

ಬುದ್ಧಿವಂತ ಸ್ನೇಹಿತನೊಂದಿಗೆ ಮಾತನಾಡುವುದು ಒಂದು ಅಪೂರ್ವ ಗ್ರಂಥವನ್ನು ಓದಿದಂತೆ. ಕವಿಯಾದ ಸ್ನೇಹಿತನೊಂದಿಗೆ ಮಾತ ನಾಡುವುದು ಪ್ರಸಿದ್ಧ ಬರೆಹಗಾರರ ಗದ್ಯ ಪದ್ಯವನ್ನು ಪಾಠಮಾಡಿದಂತೆ. ಸ್ವಭಾವದ ಔಚಿತ್ಯವನ್ನು ಕಾಯ್ದುಕೊಂಡು ಸದಾ ಜಾಗೃತಿಯಲ್ಲಿರುವ ಸ್ನೇಹಿತನೊಂದಿಗೆ ಮಾತನಾಡುವುದು ಪುರಾತನ ಋಷಿಗಳ ಮಹಾ ಗ್ರಂಥ ಗಳನ್ನು ಪಠಿಸಿದಂತೆ. ಹಾಸ್ಯ ತುಂಬಿರುವ ಸ್ನೇಹಿತನೊಂದಿಗೆ ಮಾತನಾ ಡುವುದು ರೋಮಾಂಚಕಾರೀ ಕಾದಂಬರಿಯನ್ನು ಓದಿದಂತೆ !

ಸೌಮ್ಯ ಸ್ವಭಾವದ ಪ್ರತಿಯೊಬ್ಬ ಜ್ಞಾನಶೀಲನಿಗೂ ಆತ್ಮೀಯರಾದ ಕೆಲ ಸ್ನೇಹಿತರು ಇದ್ದೇ ಇರುತ್ತಾರೆ. ಆತ್ಮೀಯ ಸ್ನೇಹಿತರೆಂದರೆ ಜನನ ಮರಣದ ಸ್ನೇಹ ಪ್ರತಿಜ್ಞೆಯನ್ನು ಸ್ವೀಕರಿಸಿದವರೆಂದಲ್ಲ. ಸಹಸ್ರಾರು ಮೈಲು ಗಳ ಅಂತರದಲ್ಲಿದ್ದರೂ ಆತ್ಮೀಯ ಸ್ನೇಹಿತನು ತನ್ನ ಸ್ನೇಹಿತನ ವಿಷಯ ದಲ್ಲಿ ಹಾರಿಕೆಯ ಸುದ್ದಿಗಳನ್ನು ನಂಬುವುದಿಲ್ಲ. ತನ್ನ ಮನೆತನದ ಗುಟ್ಟು ಗಳನ್ನು ಯಾವನು ಎದೆಬಿಚ್ಚಿ ತೋಡಿಕೊಳ್ಳುತ್ತಾನೆಯೋ ಅವನೇ ನಿಜ ವಾದ ಆತ್ಮೀಯ—ಸ್ನೇಹಿತ.

ಒಳ್ಳೆಯ ಸ್ನೇಹಿತರು ಇಲ್ಲದೇ ಹೋದರೆ ಒಂದು ದೇಶದ ಜೀವನ ಆಹ್ಲಾದಮಯವಾಗಲಾರದು. ಅನೇಕಾನೇಕ ಸ್ನೇಹಿತರಲ್ಲಿ ಕಾವ್ಯ ಬರೆಯುವ ಸ್ನೇಹಿತರೇ ಎಲ್ಲಕ್ಕೂ ಶ್ರೇಷ್ಠರು. ಆನಂತರ ಮಾತುಗಾರ, ಕಲಾವಿದ, ಗಮಕಿ ಮುಂತಾದವರು ಬರುತ್ತಾರೆ.

— "ಜೀವಿತದ ಮಹತ್ವ" ದಿಂದ

# ಬದುಕುವ ದಾರಿ

ಆಸೆಯ ಮೇಲೆ ಕೈಯೂರಿಕೊಂಡು ಬದುಕುವಂಥ ಘೋರ ಪಾತಕ ಈ ಜಗತ್ತಿನಲ್ಲಿ ಇನ್ನೊಂದಿಲ್ಲ. ಅದು ಎಲ್ಲ ಮೋಹಗಳಿಂದಲೂ ಅನಿಷ್ಟವಾದುದು.

ನಾವು ಕಷ್ಟಕಾಲದಲ್ಲಿರುವಾಗ, ಒಂದಲ್ಲ ಒಂದು ದಿನ ಸುಖದಲ್ಲಿ ಬದುಕಬಹುದೆನ್ನುವ ಆಸೆ ನಮ್ಮ ಬಳಿಯಲ್ಲಿ ಸುಳಿದು ಮನಸ್ಸಿಗೆ ಆಹ್ಲಾದವನ್ನು ಉಂಟು ಮಾಡುತ್ತದೆ. ಆದರೆ ಅದು ಕ್ಷಣಭಂಗುರವಾದುದು. ಎಂತಲೇ ತ್ಯಾಜ್ಯ.

ದಿನ ಯಾವ ರೀತಿಯಾಗಿಯೇ ಬಂದರೂ ಅದನ್ನು ಎದುರುಗೊಳ್ಳು. ಅದರಲ್ಲಿಯೇ ಸುಖವನ್ನು ಕಂಡುಕೊಂಡು ಆನಂದವಾಗಿರು. ನಾಳಿನ ಬಗ್ಗೆ ಚಿಂತಿಸುತ್ತ ಕುಳಿತುಕೊಳ್ಳಬೇಡ. ಇಂದು ಬರಬಹುದಾದ ಪ್ರಯೋಜನವನ್ನೆಲ್ಲ ಪಡೆದುಕೊಂಡು ಬಿಡು. ಎಂಥ ಕಠಿನ ಕರಾಳ ದಿನವೆಂದರೂ ಲಕ ಲಕಿಸುವ ಒಂದು ಬೆಳ್ಳಿಯ ಗೆರೆ ಅದರಲ್ಲಿ ಇದ್ದೇ ಇರುತ್ತದೆ. ಆ ಬೆಳಕನ್ನು ಕೃತಜ್ಞತೆಯಿಂದ ಬರಮಾಡಿಕೋ. ಪ್ರಶಾಂತವಾದ ಮನಸ್ಸೇ ಪರ್ಣಕುಟಿ. ಎದುರಾಗುತ್ತಿರುವ ಸಂದರ್ಭಗಳು ಸೆರೆಮನೆಯಂತೆ ಕಠಿಣವಾಗಿದ್ದರೂ ಅವುಗಳನ್ನು ನಿನ್ನ ಮನಸ್ಸಿನಿಂದ ಮಾರ್ಪಡಿಸಿಕೊಂಡು ನೀನು ಮೃದುವಾಗಿರಿಸಬಲ್ಲೆ. ಮನಸ್ಸಿನಲ್ಲಿ ಛಲವಿದ್ದರೆ ಹಂಸತೂಲದೊಳಗಿನ ಕಿನಕಾಪಿನ ಬಟ್ಟೆಯಂತೆ ಕಲ್ಲೂ ಮೃದುವಾಗಬಹುದು.

ಒಳ್ಳೆಯ ದಿನ ಕೆಟ್ಟ ದಿನ, ಯಾವುದೇ ಬರಲಿ, "ನಾನು ಬದುಕಿದ್ದೇನೆ" ಎಂದು ಹೇಳುವ ಎದೆಗಾರಿಕೆ ನಿನ್ನಲ್ಲಿರಲಿ. "ಇದೇ ನನ್ನ ಮುಕ್ತಿಯ ದಿನ" ಎಂದು ನೀನು ದಿನ ದಿನವೂ ಹೇಳಬೇಕು.

— ಒಂದು ಆಂಗ್ಲ ಗ್ರಂಥದಿಂದ

# ಜೀವನದ ಉನ್ನತಿ

ಒಳ್ಳೆಯದನ್ನು ಮಾಡುವ ಗುಣದಿಂದ ನಮ್ಮ ಜೀವನದ ಹರಹು ವಿಸ್ತಾರಗೊಳ್ಳುವುದು.

ಕಷ್ಟದೆಶೆಯಲ್ಲಿರುವವರಿಗೆ ಕೊಡುವ ಒಂದು ಉತ್ತೇಜಕಮಾತಿನಿಂದ ಜೀವನದ ಉನ್ನತಿ ವ್ಯಕ್ತವಾಗುವುದು.

ಮನುಷ್ಯನು ಪ್ರತಿದಿನವೂ ಮಾಡುವಂಥ ಈ ಅಲ್ಪ ಕಾರ್ಯಗಳಿಂದಲೇ ಆತನ ವ್ಯಕ್ತಿತ್ವಕ್ಕೆ ರೂಪವೂ ಪರಿಮಳವೂ ಉಂಟಾಗುವುದು. ಅಗತ್ಯವಿರು ವವರಿಗೆ ನಾವು ನೀಡುವ ಅಲ್ಪ ಸಹಾಯವು ವ್ಯರ್ಥಹೋಗುವುದಿಲ್ಲ. ಅದು ಕೊನೆಗೆ ಚಕ್ರಬಡ್ಡಿಯ ರೂಪದಲ್ಲಿ ನಮ್ಮೆಡೆಗೆ ಹಿಂದಿರುಗಿ ಬರುವುದು.

ಸಹಾಯ ನೀಡುವಂಥ ಅವಕಾಶಗಳು ನಮಗೆ ಎಲ್ಲೆಡೆಯಲ್ಲಿಯೂ ಎದುರಾಗುವುವು. ಸಹಾನುಭೂತಿಯ ನುಡಿಯನ್ನು ಅಪೇಕ್ಷಿಸುವ ಹೃದಯ ವೊಂದು ನಮ್ಮೆದುರಿನಲ್ಲಿ ಸದಾಕಾಲವೂ ಇದ್ದೇ ಇರುತ್ತದೆ. ಕರೆದುಕೊಳ್ಳ ಬೇಕೆಂದು ಕೈಚಾಚುವ ಜನ ಈ ಜಗತ್ತಿನಲ್ಲಿ ತುಂಬಿದ್ದಾರೆ. ಅಪರಿಚಿತ ಮನುಷ್ಯನಿಂದ ಬರುವ ಮುಗುಳು ನಗೆಯು ಇನ್ನೊಬ್ಬನ ಹೃದಯದಲ್ಲಿ ನಗೆಮುಗುಳನ್ನು ಅರಳಿಸಬಲ್ಲದು. ಕರುಣೆಯ ನೋಟದಿಂದ ದಗ್ಧ ಹೃದಯವು ಧೈರ್ಯತಂದುಕೊಳ್ಳುವುದು. ಗೆಲುವಿನ ಮಾತಿನಿಂದ ಅಸಂಖ್ಯಾತ ಹೃದಯ ಗಳು ತಮ್ಮ ಜೀವನದ ದಾರಿಯನ್ನು ಗುರುತಿಸಿಕೊಂಡಿವೆ.

ನೀನು ಹೋಗುತ್ತಿದ್ದಂತೆ ನಿನ್ನ ಬಳಿಯಿರುವ ಹೂಗಳನ್ನು ಚೆಲ್ಲು. ಅದೇ ಹಾದಿಯಿಂದ ನೀನು ಇನ್ನೊಮ್ಮೆ ಹೋಗಲಿಕ್ಕಿಲ್ಲ.

—"ಶಾಂತಿಯ ವೇದಿಕೆ" ಯಿಂದ

# ನನ್ನ ಅಭ್ಯಾಸ

ನಾನು ಓದಿರುವುದು ಒಂದೇ ಒಂದು ಗ್ರಂಥ. ನನಗೆ ಅಭ್ಯಾಸ ಹೇಳಿದವನು ಒಬ್ಬನೇ ಒಬ್ಬ ಶಿಕ್ಷಕ.

ನಾನು ಇದುವರೆಗೆ ಬದುಕಿ ಬಂದ ಜೀವನವೇ ಆ ಗ್ರಂಥ. ದಿನ ದಿನದ ನನ್ನ ಅನುಭವವೇ ಆ ಶಿಕ್ಷಕ.

ಎಲ್ಲ ಭಾಷೆಗಳಲ್ಲಿರುವ ಸರ್ವ ತತ್ತ್ವ ಶಾಸ್ತ್ರಗಳಿಗಿಂತಲೂ ಅನುಭವದ ವಾಸ್ತವತೆಯು ಹೆಚ್ಚು ಅರ್ಥಪೂರ್ಣವಾದುದು. ಸಂಗತಿ ಇಲ್ಲವೆ ಸನ್ನಿವೇಶವನ್ನು ಅಳೆಯುವಾಗ ನಾನು ಅನ್ಯರ ವಿಚಾರಗಳನ್ನು ಕಣ್ಣು ಮುಚ್ಚಿಕೊಂಡು ಎಂದೂ ಸ್ವೀಕರಿಸುವುದಿಲ್ಲ. ನನ್ನ ಮನಸ್ಸಿಗೆ ಸಮಾಧಾನ ತಂದುಕೊಳ್ಳುವುದಕ್ಕಾಗಿ ನಾನು ಪ್ರಾಚೀನ ಹಾಗೂ ಅರ್ವಾಚೀನ ಇತಿಹಾಸವನ್ನೆಲ್ಲ ಪೃಥಕ್ಕರಣ ಬುದ್ಧಿಯಿಂದ ಕೆದಕಿ ನೋಡುತ್ತೇನೆ. ಪರಿಸ್ಥಿತಿ ಸುಲಭವಿರುವಾಗಲೂ ನಾನು ಹಳೆಯ ಪೌಲಿಕೆಗಳನ್ನು ಸ್ವೀಕರಿಸಿಲ್ಲ. ನಮ್ಮ ನೀತಿ ಹಾಗೂ ರಾಷ್ಟ್ರ ಜೀವನದ ಮೂಲವನ್ನು ಶೋಧಿಸಿ ಉಳಿದ ಜನಾಂಗಗಳೊಂದಿಗೆ ನಮ್ಮ ಸಾಮರ್ಥ್ಯವನ್ನು ನಾನು ಆಗಾಗ ಒರೆಹಚ್ಚಿ ನೋಡಿಕೊಳ್ಳುತ್ತೇನೆ. ಅನ್ಯರೊಂದಿಗೆ ಹೋಲಿಕೆಮಾಡಿ ನೋಡಿಕೊಂಡಾಗಲೇ ನಮ್ಮ ಪರಿಸ್ಥಿತಿಯ ನಿಜಕಲ್ಪನೆ ನಮಗೆ ಮನವರಿಕೆಯಾಗುತ್ತದೆ.

— ಮುಸೋಲಿನಿ

# ಬದಲಾವಣೆ

ಇಂದು ನಿನ್ನೆಯಲ್ಲ. ನಾವು ಪ್ರತಿಕ್ಷಣವೂ ಬದಲಾವಣೆ ಹೊಂದುತ್ತಲೇ ಇದ್ದೇವೆ.

ಪರಿಸ್ಥಿತಿಯೊಂದಿಗೆ ನಾವು ಬದಲಾವಣೆ ಹೊಂದಬೇಕೆಂದರೆ ನಮ್ಮಂತೆಯೇ ನಮ್ಮ ವಿಚಾರ ಹಾಗೂ ಕೃತಿಗಳು ಬದಲಾವಣೆ ಹೊಂದಬೇಕು. ಬದಲಾವಣೆಯ ನೋವು ಬಹು ದೊಡ್ಡದು. ಆದರೂ ಅದು ಅಗತ್ಯವಾದ ನೋವು. ಆ ನೋವನ್ನು ನಾವು ಪ್ರಗತಿಯ ಸುಖಕ್ಕಾಗಿ ತಾಳಿಕೊಳ್ಳಬೇಕಾಗಿದೆ. ಬದಲಾವಣೆಯಲ್ಲಿಯೇ ಮಾನವ ಜಗತ್ತಿಗೆ ಭವಿಷತ್ತಿನ ಆಸೆ ಇದೆ.

ಇತಿಹಾಸವು ಕಾಲಕ್ರಮೇಣದಲ್ಲಿ ಕಥೆಯಾಗಿ ಪರಿಣಮಿಸುತ್ತದೆ. ಸಂಗತಿಯು ಸಂದೇಹದಲ್ಲಿ ಪರಿವರ್ತನೆಗೊಳ್ಳುವುದು. ನೆನಹು ಶಿಲ್ಪವನ್ನು ಆಶ್ರಯಿಸುವುದು. ಶಿಲಾಸ್ತಂಭವು ಉರುಳಿಬಿದ್ದು ಮಣ್ಣುಗೂಡುವುದು. ಗಿರಿಶಿಖರಗಳನ್ನು ನಾಚಿಸುವಂಥ ಇಜಿಪ್ತದ ಪಿರ್‍ಯಾಮಿಡ್ಡುಗಳೂ ಕೊನೆಗೆ ಮಳಲ ಕಣದ ಗುಂಪೆಗಳಾಗಬಹುದೇ ?

— ವಿಚಕ್ಷಕನಿಂದ

# ನಾವೀನ್ಯತೆ

ಜಗತ್ತಿನ ಅರ್ಧದಷ್ಟು ದುಃಖಕ್ಕೆ ನಾವೇ ಕಾರಣರಾಗಿದ್ದೇವೆ. ನಮ್ಮ ಸದಸದ್ವಿವೇಕವು ಸೂಚಿಸಿದಂತೆ ನಾವು ಅನೇಕ ಸಂದರ್ಭಗಳಲ್ಲಿ ಆಚರಿಸುವುದಿಲ್ಲ. ಇತರರಿಂದ ಮಾರ್ಗದರ್ಶನ ಲಭಿಸಿದಾಗಲೇ ನಾವು ಮುಂದಡಿಯನ್ನಿಡಬೇಕೆಂಬುದು ತಪ್ಪು. ನಮ್ಮಲ್ಲಿ ಅತ್ಯಂತ ಜಾಣರಾದವರ ಬಳಿಯಲ್ಲಿ ಕೂಡ ಇನ್ನೊಬ್ಬರಿಗೆ ಕೊಡಲು ಹೆಚ್ಚಿನದೇನೂ ಇರುವುದಿಲ್ಲ.

ಮನಸ್ಸನ್ನು ವ್ಯವಸ್ಥಿತವಾಗಿಡಲು ಅಗತ್ಯವಾದ ಶಾಂತಿ ಮನೆಯಲ್ಲಿ ದೊರೆಯದೇ ಹೋದರೆ ಜೀವನವು ಕೇವಲ ಪ್ರತಿಧ್ವನಿಗಳ ಒಂದು ದೀರ್ಘ ಸರಪಳಿಯಾಗುವುದು. ಪುನರುಚ್ಚರಣೆ ಜೀವನದಲ್ಲಿ ಒಮ್ಮೆ ಕಾಲಿರಿಸಿ ತೆಂದರೆ ನಾವೀನ್ಯತೆ ಕ್ರಮ ಕ್ರಮೇಣ ಜೀವನದಿಂದ ಅಳಿಸಿಹೋಗುವುದು. ನಾವೀನ್ಯತೆ ಅಳಿದು ಹೋದ ಮೇಲೆ ಜೀವನದಲ್ಲಿ ಸೌಹಾರ್ದ ಸಹಾನುಭೂತಿ ಯಾವುದೂ ಉಳಿಯುವುದಿಲ್ಲ. ತಮ್ಮನ್ನು ಹಿಂದೆ ಬಿಟ್ಟು ಜಗತ್ತು ಓಡಿಹೋಗತೊಡಗಿದೆಯೆಂದು ಆ ಜನರು ಗೊಣಗುಟ್ಟತೊಡಗುವರು.

ಜಗತ್ತು ಯಾರಿಗಾಗಿಯೂ ಕಾಯುವುದಿಲ್ಲ. ಬರಬಾರದೆಂಬ ಹಟತೊಟ್ಟವರನ್ನು ಹಿಂದೆ ಸರಿಸಿ ಅದು ಮುನ್ನುಗ್ಗುವುದು. ಅತ್ಯಂತ ಸುರುಚಿರವಾದ ಬದುಕಿನ ಮಾರ್ಗವನ್ನು ಮುಂಚಿತವಾಗಿಯೇ ಕಂಡುಕೊಳ್ಳುವುದು ಜೀವನದ ಶ್ರೇಷ್ಠ ಕಲೆಯಾಗಿದೆ.

— ಜರ್ಮನ್ ಗ್ರಂಥಕರ್ತನಿಂದ

# ಎರಡು ಬಗೆಯ ಜನರು

ಒಬ್ಬ ಶ್ರೀಮಂತ ಗೃಹಸ್ಥನ ತೋಟದಲ್ಲಿ ಇಬ್ಬರು ತೋಟಿಗರು ಕೆಲಸಕ್ಕಿದ್ದರು. ಅವರಲ್ಲಿ ಒಬ್ಬನು ಯಾವ ಕೆಲಸವನ್ನೂ ಮಾಡದ ಮೈಗಳ್ಳನಾಗಿದ್ದನು. ಒಡೆಯನು ಎಂದಾದರೊಮ್ಮೆ ತೋಟಕ್ಕೆ ಬಂದಾಗ ಅವನು ಮುಂದೆಬಾಗಿ, ವಿನಯವನ್ನು ನಟಿಸಿ, "ಆಹಾ, ನನ್ನ ಒಡೆಯನ ಮುಖವೆಷ್ಟು ಸುಂದರವಾಗಿದೆ," ಎಂದು ಕುಣಿದಾಡುತ್ತಿದ್ದನು. ಇನ್ನೊಬ್ಬನು ಮಾತ್ರ ಯಾವ ಮಾತನ್ನೂ ಆಡದೆ ತೋಟದಲ್ಲಿ ಕಷ್ಟಪಟ್ಟು ದುಡಿದು ಎಲ್ಲ ಬಗೆಯ ಹಣ್ಣು ಹಂಪಲುಗಳನ್ನು ಬೆಳೆದುಕೊಂಡು ದೂರದಲ್ಲಿದ್ದ ತನ್ನ ಒಡೆಯನ ಮನೆಗೆ ಮುಟ್ಟಿಸಿ ಬರುತ್ತಿದ್ದನು. ತೋಟದ ಒಡೆಯನು ಈ ಇಬ್ಬರು ತೋಟಿಗರಲ್ಲಿ ಯಾರನ್ನು ಹೆಚ್ಚಾಗಿ ಮೆಚ್ಚಬಹುದು?

ಈ ಜಗತ್ತೇ ಒಂದು ತೋಟ. ಪರಮಾತ್ಮನೇ ಅದರ ಒಡೆಯ. ಇಲ್ಲಿ ಎರಡು ಬಗೆಯ ತೋಟಗಾರರಿದ್ದಾರೆ. ಒಬ್ಬನು ಆಲಸಿ, ವಂಚಕ, ಮೋಸಗಾರ. ಪರಮಾತ್ಮನ ವರ್ಣ ವಿನ್ಯಾಸದ ಕಡೆಗೇ ಆತನ ಗಮನ. ಇನ್ನೊಬ್ಬನು ಮಾತಾಳಿಯಲ್ಲ. ದರಿದ್ರರೂ ದುರ್ಬಲರೂ ಆದ ಪರಮಾತ್ಮನ ಮಕ್ಕಳ ರಕ್ಷಣೆಯ ಕಡೆಗೆ ಅವನು ಲಕ್ಷ್ಯ ಕೊಡುತ್ತಾನೆ. ಈ ಎರಡು ಬಗೆಯ ಜನರಲ್ಲಿ ಪರಮಾತ್ಮನಿಗೆ ಯಾರು ಹೆಚ್ಚು ಪ್ರಿಯರೆನಿಸಬಹುದು? ನಿಶ್ಚಯವಾಗಿಯೂ ಮಕ್ಕಳ ಯೋಗಕ್ಷೇಮವನ್ನು ನೋಡಿಕೊಳ್ಳುವವನೇ ಎಂದು ಹೇಳಬೇಕಾಗುತ್ತದೆ.

ಒಡೆಯನ ಸೇವೆ ಮಾಡಬೇಕೆನ್ನುವವನು ಮೊದಲು ಒಡೆಯನ ಮಕ್ಕಳ ಸೇವೆಯನ್ನು ಮಾಡಲಿ. ತನ್ನ ಮಕ್ಕಳಿಗೆ ಸಲ್ಲುವ ಸೇವೆಯನ್ನು ದೇವರು ಹೆಚ್ಚಾಗಿ ಮೆಚ್ಚುತ್ತಾನೆ.

— ವಿವೇಕಾನಂದ

# ಮದುವೆ

ನಿನ್ನನ್ನು ಮೀರಿಸುವಂಥ ಸಂತಾನವನ್ನು ನೀನು ಪಡೆಯಬೇಕು. ಅದಕ್ಕಾಗಿ ಮೊದಲು ನಿನ್ನನ್ನೇ ನೀನು ಬಲಪಡಿಸಿಕೋ. ನಿನ್ನ ದೇಹ ಹಾಗೂ ವಿಚಾರ ಶಕ್ತಿಗಳು ಬಲಗೊಳ್ಳಲಿ. ನೀನು ಮುಂದಕ್ಕೆ ಮಾತ್ರ ಬೆಳೆದರೆ ಸಾಲದು. ಎತ್ತರವಾಗಿಯೂ ಬೆಳೆಯಬೇಕು. "ಎತ್ತರ" ಎನ್ನುವ ಮಾತಿನಲ್ಲಿರುವ ಅರ್ಥವನ್ನು ಅರಿತುಕೊಳ್ಳು.

ನಿನಗಿಂತ ಉತ್ತಮರಿಗೆ ಜನ್ಮ ಕೊಡುವುದೇ ಮದುವೆಯ ಗುರಿಯಾಗಿದೆ. ಗಂಡು–ಹೆಣ್ಣಿನಲ್ಲಿ ಉಂಟಾಗುವ ಆ ನಿರ್ಧಾರವನ್ನೇ ನಾನು ಮದುವೆಯೆಂದು ಕರೆಯುತ್ತೇನೆ. ಮದುವೆಯಾಗಬೇಕೆನ್ನುವ ಮನುಷ್ಯನು ಮದುವೆಗೆ ಬೇಕಾದ ಸ್ನೇಹ–ಬುದ್ಧಿ ತನ್ನಲ್ಲಿ ಇದೆಯೇ ಎಂದು ಮೊದಲು ತನ್ನನ್ನೇ ತಾನು ಕೇಳಿಕೊಳ್ಳಲಿ. ವೃದ್ಧಾಪ್ಯದವರೆಗೂ "ಈ" ಹೆಣ್ಣಿನೊಡನೆ ತಾನು ಕಾಲ ಕಳೆಯಬಲ್ಲನೋ ಹೇಗೆನ್ನುವ ಪ್ರಶ್ನೆಗೆ ಆತನಿಂದ ಸಮರ್ಪಕವಾದ ಉತ್ತರ ಬರಬೇಕು.

ಇನ್ನೊಂದು ಜೀವದೊಂದಿಗೆ ಹೊಂದಿಕೊಂಡು ಹೋಗಬೇಕೆನ್ನುವುದೇ ಮದುವೆಯಲ್ಲವೇ? ಮದುವೆಯಲ್ಲಿ ಸ್ನೇಹಬಂಧನದ ವಿನಾ ಬೇರೆ ಯಾವುದಿದೆ? ಉಳಿದದ್ದೇನಾದರೂ ಇದ್ದರೆ ಅದೆಲ್ಲ ಕ್ಷಣಿಕ. ಮದುವೆಯಿಂದ ಏರ್ಪಡುವ ಸಂಬಂಧದ ಬಹುಭಾಗವೆಲ್ಲ ಮಾತುಕತೆಯಲ್ಲಿ ಕಳೆದು ಹೋಗಬೇಕಾಗುತ್ತದೆ. ಮಾತುಕತೆಗೆ ಬೇಕಾಗುವ ಹೊಂದಿಕೆಯ ಮನಸ್ಥಿತಿ ಮದುವೆಯಾಗುವವನಲ್ಲಿ ಬೇಕು.

— ನೀತ್ಸೆ

# ಜೀವನದ ಸದುಪಯೋಗ

ನಿನ್ನ ಮನಸ್ಸಿನ ಬಯಕೆಗಳು ಕೈಗೂಡಲಿಲ್ಲವೆಂದು ನಿನಗೆ ಪರಿತಾಪವೇ? ತಮ್ಮ ಮನಸ್ಸಿನಂತೆ ಆದವರು ಈ ಜಗತ್ತಿನಲ್ಲಿ ಎಷ್ಟು ಜನರಿದ್ದಾರೆ? ನಾನೂ ಇಲ್ಲ, ನೀನೂ ಇಲ್ಲ, ಬೇರೆ ಇನ್ನೊಬ್ಬನು ಯಾವನೂ ಇಲ್ಲ.

ದೊರೆಯಾಗಲಿ ಧರ್ಮಗುರುವಾಗಲಿ-ಈ ಜಗತ್ತಿನಲ್ಲಿ ಹುಟ್ಟಿದವರೆಲ್ಲರೂ ಒಂದಲ್ಲ ಒಂದು ವಿಧವಾದ ನೋವನ್ನು ಉಣ್ಣುವವರೇ ಆಗಿದ್ದಾರೆ. ಹೀಗಿರುವಾಗ ಉತ್ತಮ ಜೀವನದ ಹಾದಿ ಯಾವುದೆನ್ನುವ ಪ್ರಶ್ನೆ ಎದುರು ಬರುತ್ತದೆ. ಸತ್ಕಾರ್ಯಕ್ಕಾಗಿ ಸಂಕಟಗಳನ್ನು ಅನುಭವಿಸುವುದೇ ಜೀವನದ ಶ್ರೇಷ್ಠ ಹಾದಿಯಾಗಿದೆ.

ಐಶ್ವರ್ಯ, ಅಧಿಕಾರ ಹಾಗೂ ಉನ್ನತ ಸ್ಥಾನಗಳನ್ನು ಮನುಷ್ಯರಲ್ಲಿ ದುರ್ಬಲರಿದ್ದವರು ಮಾತ್ರ ಕೊಂಡಾಡುತ್ತಾರೆ. ಇವುಗಳಲ್ಲಿ ಯಾವುದೊಂದೂ ಶಾಶ್ವತವಾದುದಲ್ಲ. ಈ ಎಲ್ಲ ನಶ್ವರ ಥಳಕಿನ ಬಂಧನದಿಂದ ಬಿಡುಗಡೆ ಮಾಡಬೇಕೆಂದು ಶ್ರೇಷ್ಠನಾದವನು ದೇವರಲ್ಲಿ ಮೊರೆಯಿಡುತ್ತಾನೆ. ಜೀವನದ ಶ್ರೇಷ್ಠ ಮಾರ್ಗದಲ್ಲಿ ನಡೆದುಹೋಗುವ ನಂಬಿಗೆ ಮನುಷ್ಯನಲ್ಲಿ ಉಂಟಾಗಬೇಕು.

ಕಾಲವಿನ್ನೂ ಇದೆ. ಇಂದಾಗುವುದನ್ನು ನಾಳಿಗೆ ಮುಂದೂಡಬಾರದು. ನಮ್ಮೊಳಗಿನ ಕಲ್ಮಿಷಗಳನ್ನು ಹೊರದೂಡುವುದಕ್ಕೆ ಇದೇ ಯೋಗ್ಯ ಕಾಲವಾಗಿದೆ. ನಮ್ಮ ಆತ್ಮಕ್ಕೆ ನಾವು ಒತ್ತಾಯವನ್ನು ತಾರದೆ ನಮ್ಮಿಂದ ಘಟಿಸುವ ಪಾಪಾಚರಣೆಗಳನ್ನು ನಾವು ಹಿಮ್ಮೆಟ್ಟಲಾರವು. ಸೌಹಾರ್ದದಲ್ಲಿ ಪಡೆದಿರುವುದನ್ನು ನಾವು ಸೋಮಾರಿತನದಲ್ಲಿ ಕಳೆದುಕೊಳ್ಳಬಾರದು. ಮನುಷ್ಯಜೀವನವೊಂದು ದೊಡ್ಡ ದಾನವಾಗಿದೆ. ನಾವು ಅದನ್ನು ಸದುಪಯೋಗಪಡಿಸಿಕೊಳ್ಳಬೇಕು.

— "ಜ್ಞಾನ"ದಿಂದ

# ಹೊಸ ಹಾದಿ

ಹಳೆಯದನ್ನೂ ಕೊಳೆಯೂದುದನ್ನೂ ಪ್ರಕೃತಿಯು ಕ್ಷಮಿಸುವುದಿಲ್ಲ. ಅನ್ಯರ ದುಡಿತದ ಮೇಲೆ ಜೀವಧಾರಣ ಮಾಡುವ ಪರೋಪಜೀವಿಯು ಬಹಳ ಕಾಲ ಬಾಳಲಾರನು.

ಜೀವನಕ್ಕೆ ದೇಹಶಕ್ತಿ, ಮಾನಸಿಕಶಕ್ತಿ ಹಾಗೂ ಆತ್ಮಶಕ್ತಿಗಳೇ ಮುಖ್ಯವಾದುವುಗಳು. ಇವುಗಳಲ್ಲಿ ಒಂದು ದುರ್ಬಲವಾದರೂ ಜೀವಿತದ ಗುರಿ ಸಫಲವಾಗಲಾರದು. ಉಣ್ಣೆಯ ಬಟ್ಟೆಯು ಚಳಿಮಳೆಗಳಿಂದ ನಮ್ಮನ್ನು ಕಾಪಾಡಬಹುದು. ಆದರೆ ಮನುಷ್ಯತ್ವದ ನಿಜವಾದ ಬಲವಿರುವುದು ಮನುಷ್ಯನಿಗೆ ಎದುರಾಗುವ ಎಡರುಗಳಲ್ಲಿ! ವಿರೋಧಗಳ ಸಮ್ಮುಖದಲ್ಲಿಯೇ ಆತ್ಮ ಶ್ರೀ ಬಲಗೊಳ್ಳುತ್ತದೆ. ಆ ಪರೀಕ್ಷೆಯಲ್ಲಿ ಪಾರಾದ ಮೇಲೆ ಜೀವನದಲ್ಲಿ ದ್ವಂದ್ವಕ್ಕೆ ಇಂಬು ಉಳಿಯುವುದಿಲ್ಲ. ಆಡುವ ಮಾತು ಹಾಗೂ ಮಾಡುವ ಕೆಲಸಗಳಲ್ಲಿ ಸುಂದರವಾದ ಸಮನ್ವಯ ಉಂಟಾಗುವುದು. ಆಗ ಮಾತಿಗಿಂತ ಕೃತಿಯ ತೂಕವೇ ಹೆಚ್ಚಾಗುವುದು.

ನಿಮ್ಮ ಜೀವನವು ಏನಾಗಬೇಕೆಂಬುದನ್ನು ನಿರ್ಧರಿಸುವ ಹೊಣೆ ನಿಮ್ಮದು. ಅದನ್ನು ಇನ್ನೊಬ್ಬನಿಗೆ ಬಿಟ್ಟುಕೊಡಬೇಡಿರಿ. ಹಳೆಯ ದಾರಿಯನ್ನು ಬಿಟ್ಟು ಹೊಸ ಸಾಹಸಗಳ ಹಾದಿಯನ್ನು ತುಳಿಯಿರಿ. ಗುರಿಯ ದಾರಿ ಒಮ್ಮೆ ಗೋಚರವಾಯಿತೆಂದರೆ ದಾರಿಯಲ್ಲಿ ಹಿಮಾಲಯವಿದ್ದರೂ ನಾವು ಅದನ್ನು ದಾಟ ಹೋಗಬಲ್ಲೆವು. ಮುಂದೆ ಹೋಗುವ ಮನಸ್ಸು ನಮ್ಮಲ್ಲಿದ್ದರೆ ನಮ್ಮ ಏಳ್ಗೆಗೆ ಬೇಕಾಗುವ ಅವಕಾಶಗಳನ್ನು ಕಲ್ಪಿಸಿಕೊಳ್ಳುವ ಶಕ್ತಿಯೂ ನಮ್ಮಲ್ಲಿದೆ.

— ಜಗದೀಶ ಚಂದ್ರ ಬೋಸ

# ದೊಡ್ಡ ಅನ್ಯಾಯ

ತಮ್ಮ ಸಮಸ್ಯೆಗಳನ್ನು ವೃದ್ಧರಿಗೆ ಒಪ್ಪಿಸಿ ಎಲ್ಲ ಸಮಾಜಗಳೂ ತಪ್ಪು ಮಾಡಿವೆ.

ಹಳೆಯ ಜನರು ಸ್ವಾಭಾವಿಕವಾಗಿಯೇ ಸಂಕುಚಿತ ದೃಷ್ಟಿಯವರೂ ದುಷ್ಟ ಮನೋವೃತ್ತಿಯವರೂ ಆಗಿರುತ್ತಾರೆ. ರೋಷಕ್ಕೆ ಪ್ರತಿರೋಷ ಅವರ ಎದೆಯಲ್ಲಿ ತುಂಬಿರುತ್ತದೆ. ಅವರ ವಿಚಾರ ವಿಧಾನವನ್ನು ಇನ್ನಿತರರು ಒಪ್ಪದೇ ಹೋದರೆ ಅವರು ಮುನಿದುಕೊಳ್ಳುತ್ತಾರೆ. ಅವರು ಸೇರುವ ವಸ್ತುಗಳಿಗಿಂತ ಅವರು ಸೇರದಿರುವ ವಸ್ತುಗಳೇ ಹೆಚ್ಚಾಗಿವೆ. ದೀರ್ಘಕಾಲ ಅವರು ತಮ್ಮ ಜೀವನದೊಂದಿಗೇ ಬದುಕಿ ಬಂದಿರುವುದರಿಂದ ಅವರಿಗೆ ಆ ಬಗ್ಗೆ ಯೋಚನೆ ಮಾಡುವುದು ಯಾವುದೂ ಉಳಿದಿರುವುದಿಲ್ಲ. ಉಳಿದವರ ಜೀವನದಲ್ಲಿ ಕೈಹಾಕುವುದೊಂದೇ ಅವರ ಕೆಲಸವಾಗಿರುತ್ತದೆ. ಅವರೇ ಸರಕಾರವನ್ನು ರಚಿಸುತ್ತಾರೆ. ತಮ್ಮಿಂದ ತೊಂದರೆಗೊಳಗಾದ ಜನರಲ್ಲಿ ತಪ್ಪು ಕಲ್ಪನೆ ಹುಟ್ಟಿಸುತ್ತಾರೆ. ತಮ್ಮಿಂದ ಮೋಸಕ್ಕೊಳಗಾದ ಜನರಿಗೆ ಮಾತನ್ನೂ, ಶೋಷಣೆಗೊಳಗಾದ ಜನರಿಗೆ ಉಪದೇಶವನ್ನೂ ಅವರು ಕೊಡುತ್ತಾರೆ.

ಮೂವತ್ತೈದು ವರುಷದ ಜನರ ಕೈಗೆ ರಾಷ್ಟ್ರದ ಸರ್ವಸೂತ್ರಗಳನ್ನೂ ಒಪ್ಪಿಸಿದರೆ ರಾಷ್ಟ್ರವು ಸುಂದರವೂ ಸುಖಮಯವೂ ಆಗುತ್ತದೆ. ಯುವಕರ ವ್ಯವಹಾರದಲ್ಲಿ ಮಧ್ಯ ಬರುವ ಮುದುಕರನ್ನು ಸೀದಾ ಬಂದೀಖಾನೆಗೆ ಕಳಿಸಬೇಕು. ಆದರೆ ದುರ್ದೈವದಿಂದ ಯುವಕರಾದವರು ಇಂದು ಮುದುಕರು ಕೃಪೆಮಾಡಿಕೊಟ್ಟ ಕನಿಷ್ಠ ಸ್ಥಾನದಲ್ಲಿ ಉಳಿದುಕೊಂಡು ಜೀವನ ಸಾಗಿಸುವ ಕಾರ್ಯದಲ್ಲಿ ತತ್ಪರರಾಗಿದ್ದಾರೆ. ಜನತೆಯ ಬದುಕಿನೊಂದಿಗೆ ನಡೆಯುವ ಕಾಲವೂ ಉತ್ಸಾಹವೂ ಈಗ ಅವರಲ್ಲಿ ಉಳಿದಿಲ್ಲ.

— ಸಿ. ಇ. ಎಂ. ಜೋಡ್

# ಪ್ರಪಂಚವನ್ನು ಎದುರಿಸು

ಮಿತ್ರನೇ, ಪ್ರಪಂಚವನ್ನು ಧೈರ್ಯದಿಂದ ಎದುರುಗೊಳ್ಳು. ಅತ್ಯಂತ ಅನಿಷ್ಟಕ್ಕೂ ನೀನು ಸಿದ್ಧನಾದರೆ ಆಗ ನಿಜವಾಗಿಯೂ ನಿರಾಸೆಗೊಳ್ಳಲಾರೆ. ಆತ್ಮಾವಲಂಬನವೇ ಜಯಕ್ಕೆ ದಾರಿ. ನಮ್ಮ ಪ್ರತಿಯೊಂದು ಕೆಲಸವೂ ನಮ್ಮ ಶೀಲದ ಮೇಲೆಯೇ ನಿಂತಿದೆ. ಧೈರ್ಯದಿಂದಲೂ ಉದಾತ್ತ ಧ್ಯೇಯ ದಿಂದಲೂ ಕೆಲಸಮಾಡು. ಕಷ್ಟಗಳಿಗೆ ಹೆದರಬೇಡ. ಸೋಲು ನಿನ್ನ ದೌರ್ಬಲ್ಯದ ಫಲ. ಸೋಲಾದ ಕೂಡಲೇ ನಿನ್ನ ದೋಷಗಳನ್ನು ಕಂಡು ಹಿಡಿದು ಅವುಗಳನ್ನು ನಿರ್ಮೂಲಮಾಡು. ನಿನ್ನನ್ನು ನೀನು ಎಷ್ಟೆಷ್ಟು ಹೆಚ್ಚಾಗಿ ಜಯಿಸುತ್ತೀಯೋ ಅಷ್ಟು ಹೆಚ್ಚಿನ ಪ್ರಮಾಣದಲ್ಲಿ ನಿನಗೆ ಹೊರ ಗಿನ ಜಯ ಸಿದ್ಧವೆಂದು ತಿಳಿ. "ಶುದ್ಧವಾದ ಅದುರು ಅತಿಕಾವುಳ್ಳ ಕುಲು ಮೆಯಿಂದ ಬರುತ್ತದೆ. ಉಜ್ವಲವಾದ ಮಿಂಚು ಹುಟ್ಟುವುದು ಕಾರ್ಮೋಡ ಗಳಿಂದ" ಎಂದು ಹೇಳಿರುವುದನ್ನು ನೀನು ಎಂದೂ ಮರೆಯಬೇಡ.

ಸ್ವಾರ್ಥ ಜೀವನವನ್ನು ನಡೆಸಿ ಅಪಾರ ಐಶ್ವರ್ಯವನ್ನು ಗಳಿಸುವುದ ಕ್ಕಿಂತ ಸಾಮಾನ್ಯ ಜನರ ದುಃಖದ ನೂರರಲ್ಲಿ ಒಂದು ಪಾಲನ್ನಾದರೂ ಹೋಗಲಾಡಿಸಲು ನಿನ್ನ ಜೀವಮಾನವನ್ನೆಲ್ಲಾ ಕಳೆಯುವದೇ ಶ್ರೆಯಸ್ಕರ. ನಿನ್ನ ಸುತ್ತುಮುತ್ತಲೂ ರೋಗರುಜಿನಗಳೂ, ಕೊಳೆ ಕಶ್ಮಲಗಳೂ, ಅತೃಪ್ತಿ ಅಶಾಂತಿಗಳೂ ತುಂಬಿರುವಾಗ ನೀನೊಬ್ಬನೇ ಸುಖಿಯಾಗಿರಲು ಸಾಧ್ಯವೇ? ಇವುಗಳನ್ನು ಹೋಗಲಾಡಿಸಿ ಪ್ರಪಂಚದ ಸ್ಥಿತಿಯನ್ನು ಸ್ವಲ್ಪವಾದರೂ ಉತ್ತಮಗೊಳಿಸಲು ಪ್ರಯತ್ನಿಸುವುದೇ ಎಲ್ಲರ ಕರ್ತವ್ಯವಾಗಿದೆ. ನೀನೂ ಇದೇ ಗುರಿಯನ್ನೇ ಸಾಧಿಸಬೇಕು. ಒಬ್ಬೊಬ್ಬನೂ ಇದನ್ನು ಬೇರೆ ಬೇರೆ ಯಾಗಿ ಸಾಧಿಸುವುದು ಕಷ್ಟಸಾಧ್ಯ. ಆದರೂ ಎಲ್ಲರೂ ತಮ್ಮ ತಮ್ಮ ಭಾಗದ ಕರ್ತವ್ಯವನ್ನು ಮಾಡಬೇಕು. ಪ್ರಪಂಚದ ಈ ನಾಟಕದಲ್ಲಿ ನಿನ್ನ ಪಾತ್ರವನ್ನು ನೀನೂ ಉತ್ತಮ ರೀತಿಯಲ್ಲಿ ನಿರ್ವಹಿಸು.

— ಮೋಹನಸಿಂಗ

# ಅಂತರಂಗ ಪರಿಜ್ಞಾನ

ನಾವು ನಮ್ಮನ್ನೇ ಕುರಿತು ದೊಡ್ಡ ಭಾವನೆ ತಳೆಯಬಾರದು. ಆ ಭಾವನೆ ನಮ್ಮಲ್ಲಿ ಬಂದರೆ ತಿಳಿವಳಿಕೆ, ಸೌಜನ್ಯ ಎರಡೂ ಉಳಿಯುವುದಿಲ್ಲ. ನಮ್ಮಲ್ಲಿ ಪ್ರತಿಯೊಬ್ಬರಲ್ಲಿಯೂ ಬೆಳಕಿದೆ. ನಮ್ಮ ಅಲಕ್ಷ್ಯದಿಂದ ನಾವದನ್ನು ಕಳೆದುಕೊಳ್ಳುತ್ತಿದ್ದೇವೆ. ಅಲ್ಲದೆ ಒಳಗೆ ಎಷ್ಟು ಕುರುಡರಿದ್ದೇವೆಂಬುದನ್ನು ನಾವು ಅನೇಕ ವೇಳೆ ಕಾಣಲಾರದವರಾಗಿದ್ದೇವೆ.

ನಾವು ಅನೇಕ ಸಂದರ್ಭಗಳಲ್ಲಿ ಅನ್ಯಾಯವನ್ನು ಮಾಡುತ್ತಿದ್ದೇವೆ. ಅದಕ್ಕೂ ಪಾಪಕರವಾದುದನ್ನು ಮಾಡುತ್ತಿದ್ದೇವೆ. ನಮ್ಮ ಅನ್ಯಾಯಗಳಿಗೆಲ್ಲ ನಮ್ಮ ಕ್ಷಮೆ ಇದೆ. ಅನ್ಯರಲ್ಲಿರುವ ಅಲ್ಪದೋಷಗಳನ್ನು ನಾವು ಎತ್ತಿ ಆಡುತ್ತೇವೆ. ನಮ್ಮಲ್ಲಿರುವ ದೊಡ್ಡ ತಪ್ಪುಗಳನ್ನು ನಾವು ಲಕ್ಷ್ಯಕ್ಕೆ ತಂದುಕೊಳ್ಳುವುದಿಲ್ಲ. ಅನ್ಯರಿಂದ ನಮಗಾಗುತ್ತಿರುವ ತೊಂದರೆಯನ್ನು ನಾವು ಕೂಡಲೇ ಅಳೆದುಬಿಡುತ್ತೇವೆ. ನಮ್ಮಿಂದ ನೋವು ತಿನ್ನುತ್ತಿರುವವರನ್ನು ನಾವು ಗಮನಿಸುವುದೇ ಇಲ್ಲ. ಯಾವ ಮನುಷ್ಯನು ತನ್ನನ್ನು ಕುರಿತು ಅಂತರಂಗದಲ್ಲಿ ವಿವೇಚನೆ ಮಾಡಿಕೊಳ್ಳುತ್ತಾನೆಯೋ ಅಂಥವನು ಅನ್ಯರ ವಿಷಯದಲ್ಲಿ ದುಷ್ಟ ತೀರ್ಮಾನಕ್ಕೆ ಎಂದೂ ಬರುವುದಿಲ್ಲ. ಅಂತರಂಗ ಪರಿಜ್ಞಾನವುಳ್ಳ ಮನುಷ್ಯನು ಉಳಿದೆಲ್ಲ ವಿಷಯಗಳ ಯೋಚನೆಯನ್ನು ಬಿಟ್ಟುಕೊಟ್ಟು ತನ್ನ ಅಂತರಂಗದ ಯೋಚನೆಯನ್ನು ಮೊದಲು ಮಾಡಿಕೊಳ್ಳುತ್ತಾನೆ. ಅನ್ಯರ ವಿಷಯದಲ್ಲಿ ಮೌನವನ್ನು ತಳೆಯದಿದ್ದರೆ ನಿನಗೆ ಅಂತರಂಗ ಶಾಂತಿ ಬರಲಾರದು. ನಿನ್ನ ಬಗ್ಗೆ ನೀನು ಮೊದಲು ಎಚ್ಚರಪಟ್ಟುಕೋ. ನಿನ್ನ ಆತ್ಮದಲ್ಲಿಯೇ ನೀನು ಇರದೇ ಹೋದರೆ ನೀನು ಹಾಗಾದರೆ ಇರುವುದೆಲ್ಲಿ? ಜಗತ್ತನ್ನೆಲ್ಲ ಸುತ್ತುವರಿದೂ ನಿನ್ನನ್ನು ನೀನು ಅರಿಯದೇ ಹೋದರೆ ಏನನ್ನು ಅರಿತಂತಾಯಿತು?

— "ಜ್ಞಾನ" ದಿಂದ

# ಬದುಕಿನ ಗುಟ್ಟು

ಆಹ್ಲಾದಕತೆಯಿಂದಲೇ ಜೀವನಕ್ಕೆ ಸುಖ. ಆಹ್ಲಾದ ಮನೋಭಾವನೆಯುಳ್ಳ ಜನರು ಸುಖಿಯಾಗಿರುವರಲ್ಲದೆ ದೀರ್ಘಕಾಲವೂ ಬದುಕುತ್ತಾರೆ. ಅವರು ಹಿಡಿದ ಕೆಲಸಕ್ಕೆ ಎಂದಿಗೂ ಹುಸಿಯಿಲ್ಲ. ಅವರಂಥ ಸುದೈವಿಗಳು ಈ ಪ್ರಪಂಚದಲ್ಲಿ ಇನ್ನೊಬ್ಬರಿಲ್ಲವೆಂದು ಹೇಳುತ್ತಾರೆ.

ನಗೆಯಾಟವಿಲ್ಲದ ಜೀವನವು ನರಳಿಕೆಯಾಗುತ್ತದೆ. ವಿನೋದದ ಎಣ್ಣೆ ಜೀವನದ ಯಂತ್ರಕ್ಕೆ ಬೇಕೇ ಬೇಕು. ಅದಿಲ್ಲದಂಥ ಜೀವನಗಳೆಷ್ಟೋ ಸವೆದುಹೋಗಿವೆ. ವಿರಸದ ಬಾಳಿನಲ್ಲಿ ನಗೆಯಿಂದಲೇ ಬೆಳದಿಂಗಳು ಸುಳಿಯುವುದು.

ಜೀವನದೊಳಗಿರುವ ನಗೆಯ ಭಾಗದ ಕಡೆಗೆ ದೃಷ್ಟಿಯನ್ನು ಹಾಕುವುದಕ್ಕೂ ಭಾಗ್ಯ ಬೇಕು. ಅದು ಅಮೌಲ್ಯ ಸಂಪತ್ತೆಂದು ಎಷ್ಟು ಜನ ತಿಳಿದಿದ್ದಾರೆ? ಬೆಳ್ಳಿ ಬಂಗಾರದ ಶ್ರೀಮಂತಿಕೆಗಿಂತ ಆಹ್ಲಾದಕತೆಯ ಶ್ರೀಮಂತಿಕೆಯೇ ನಮಗಿರಲಿ.

ಯಾವುದೇ ಕೆಲಸ ಮಾಡಿದರೂ ಅದರಲ್ಲಿಯೇ ಸುಖ ಪಡೆದುಕೊಳ್ಳುವುದನ್ನು ಮೊದಲು ಕಲಿಯಬೇಕು. ಉಳಿದ ಶಿಕ್ಷಣಗಳಂತೆಯೇ ಮನಸ್ಸಿಗೆ ಆಹ್ಲಾದಕತೆಯ ಶಿಕ್ಷಣವೂ ಬೇಕು. ವಿಶ್ವವಿದ್ಯಾನಿಲಯದ ಎಲ್ಲ ಪದವಿಗಳಿಗಿಂತಲೂ ಅದು ಹೆಚ್ಚಿನದು. ಇಚ್ಛಿಸಿದರೆ ಆ ಸಂಪತ್ತನ್ನು ಸಕಲರೂ ಸಂಪಾದಿಸಲು ಸಾಧ್ಯವಿದೆ.

ಗಂಟು ಮೋರೆಯ ದೊಡ್ಡ ಮನುಷ್ಯನಿಗಿಂತ ನಗೆಮುಖದ ಸಣ್ಣ ಮನುಷ್ಯನು ಹೆಚ್ಚಿನವನೆಂದು ನನ್ನ ಭಾವನೆ. ನಗೆಯಾಡಲುಬಾರದ ಮನುಷ್ಯನು ಅನ್ಯರಿಗೆ ತಲೆಬೇಸಿಗೆ ಹಿಡಿಸುತ್ತಾನೆ. ದೇವರೇ, ನಾವು ಸದಾ ಕಾಲವೂ ನಗುವಂತೆ ನಿನ್ನ ಅನುಗ್ರಹವಾಗಲಿ.

— ಆರಿಸನ್

# ಜೀವನದಲ್ಲಿ ಜಯ

ಜನಸಾಮಾನ್ಯರಲ್ಲಿ ಅತ್ಯಂತ ಕನಿಷ್ಠನಾದವನಿಗೂ ಜೀವನದಲ್ಲಿ ಜಯ ಸಂಪಾದಿಸುವುದು ಸಾಧ್ಯವಿದೆ. ಆತನು ಜೀವನವನ್ನು ನಗೆಯಿಂದ ಎದುರಿಸಬೇಕು. ತನ್ನ ಬದುಕಿನಲ್ಲಿ ಎದುರಾಗುವ ಪ್ರತಿಯೊಂದು ವ್ಯಕ್ತಿಯನ್ನೂ ಅವನು ಪ್ರೀತಿಯಿಂದ ಬರಮಾಡಿಕೊಳ್ಳಬೇಕು.

ಪ್ರತಿಯೊಬ್ಬರನ್ನೂ ಪ್ರಿತಿಯಿಂದ, ಮಮತೆಯಿಂದ, ಕರುಣೆಯಿಂದ, ಸಹಾಯ ಮಾಡುವ ದೃಷ್ಟಿಯಿಂದ ನೋಡುವುದೂ ಜೀವನದಲ್ಲಿ ಬಹು ದೊಡ್ಡ ಸಂಪತ್ತಾಗಿದೆ. ಮುಖದಲ್ಲಿ ನಗೆಯುಳ್ಳಾತನನ್ನು ಪರಿಚಯಮಾಡಿ ಕೊಡಲು ಬೇರೆ ಇನ್ನೊಬ್ಬರು ಬೇಕಾಗಲಾರರು. ಆತನಿಗೆ ಎಲ್ಲೆಡೆಗಳಲ್ಲಿಯೂ ಸ್ವಾಗತವಿದೆ.

ಮನುಷ್ಯನ ಮುಖದ ಸೂರ್ಯಪ್ರಭೆಗಿಂತ ಈ ಜಗತ್ತಿನಲ್ಲಿ ಉಳಿದ ಯಾವ ಐಶ್ವರ್ಯವೂ ಹೆಚ್ಚಿನದಲ್ಲ. ಪರಸ್ಪರರಿಗೆ ಅನುಕೂಲವಾಗುವ ಮನೋಭಾವನೇ ಹೆಚ್ಚಿನ ಐಶ್ವರ್ಯವಾಗಿದೆ. ಈ ಶ್ರೀಮಂತಿಕೆಯನ್ನು ಪಡೆದವನ ಮೇಲೆ ಪ್ರಕೃತಿಯ ಆಶೀರ್ವಾದವು ಸದಾಕಾಲವೂ ಇದ್ದೇ ಇರುತ್ತದೆ. ಹೂವಿನಿಂದ ನಾರು ಸ್ವರ್ಗಕ್ಕೆ ಎನ್ನುವಂತೆ ಈ ಗುಣಧರ್ಮವುಳ್ಳ ವ್ಯಕ್ತಿಯೊಂದಿಗೆ ಸಹವಾಸಮಾಡುವವರೂ ಅವಳ ಕರುಣೆಗೆ ಪಾತ್ರರಾಗುತ್ತಾರೆ.

ಉಲ್ಹಾಸ ಮನೋವೃತ್ತಿಯುಳ್ಳವರಿಗೆ ಎಂದೆಂದಿಗೂ ಬಡತನವಿಲ್ಲ. ದಾನಕೊಟ್ಟಂತೆ ಅವರ ಸಂಪತ್ತು ಇಮ್ಮಡಿಸುತ್ತ ಹೋಗುವುದು. ನೆಲದಲ್ಲಿ ಚೆಲ್ಲಿದ ಬೀಜಕ್ಕೆ ಅದನ್ನು ಹೋಲಿಕೆಮಾಡಬಹುದು. ಬಿತ್ತಿದಂತೆ ಬೆಳೆ ಹುಲುಸಾಗುತ್ತದೆ.

ಅಯ್ಯಾ ಮನುಷ್ಯನೇ, ಜೀವನವನ್ನು ಬಣ್ಣದ ಕನ್ನಡಕದಿಂದ ನೋಡಬೇಡ. ಎಲ್ಲವನ್ನೂ ತಿಳಿಯಾದ ಕಣ್ಣಿನಿಂದಲೇ ನೋಡು.

— ಓ. ಮಾರ್ಡನ್

# ಶಿಕ್ಷಕರು

ಅಧ್ಯಾಪಕವೃತ್ತಿಯೆಂದರೆ ತರಗತಿಯಲ್ಲಿ ಭಾಷಣ ಮಾಡುವುದು ಎಂದು ಅನೇಕರು ತಿಳಿದಿದ್ದಾರೆ. ಆದರೆ ಸೂಕ್ಷ್ಮವಾಗಿ ಪರೀಕ್ಷಿಸಿ ನೋಡಿ ದಲ್ಲಿ ವಿದ್ಯಾರ್ಥಿಗಳೊಡನೆ ಕಲಿತು, ಬೆರೆತು, ಅವರೊಡನೆ ಆಟವಾಡಿ, ಸರಸ ವಾಡಿ, ಪ್ರಯಾಣಮಾಡಿ, ಅವರ ಸಭೆಗಳಲ್ಲಿ ಭಾಗವಹಿಸಿ, ಅವರ ತಿಳಿ ವಳಿಕೆಯನ್ನು ಹೆಚ್ಚಿಸಿ, ನಡತೆಯನ್ನು ತಿದ್ದಿ, ಅವರನ್ನು ಸಮಾಜದ ಸೇವಕ ರನ್ನಾಗಿಯೂ, ಜನಾಂಗದ ಸತ್ಪ್ರಜೆಗಳನ್ನಾಗಿಯೂ, ಜವಾಬ್ದಾರಿಯುಳ್ಳ ಮಹತ್ತರವಾದ ಧ್ಯೇಯಗಳುಳ್ಳ ಮುಂದಾಳುಗಳನ್ನಾಗಿಯೂ ಮಾಡ ತಕ್ಕದ್ದು ಅಧ್ಯಾಪಕರ ಕೆಲಸವಾಗಿದೆ. ಬಡವರು, ಬಲ್ಲಿದರು, ಬಂಧುಗಳು, ಆ ಕೋಮಿನವರು, ಈ ಗುಂಪಿನವರು ಎಂಬ ಭೇದಭಾವಕ್ಕೆ ಅವರ ಹೃದ ಯದಲ್ಲಿ ಸ್ಥಳವಿರಕೂಡದು. ಅವರು ಜೀವನದ ಎಲ್ಲ ಭಾಗಗಳಲ್ಲಿಯೂ ಮಾದರಿಯಾಗಿರಬೇಕು.

ಅಧ್ಯಾಪಕವೃತ್ತಿಯೆಂದರೆ ಯಂತ್ರಗಳನ್ನು ನಡೆಯಿಸುವುದಲ್ಲ. ಮಣ್ಣು ಕಲ್ಲು ಮೊದಲಾದ ನಿರ್ಜೀವ ವಸ್ತುಗಳಿಗೆ ರೂಪಕೊಡುವುದೂ ಅಲ್ಲ. ಚೈತನ್ಯ ಮಯವಾದ ಮನೋಹರವಾದ ಸಜೀವವಸ್ತುಗಳಿಗೆ ಕಾಂತಿಯನ್ನೂ, ಬೆಳ ಕನ್ನೂ, ತೇಜಸ್ಸನ್ನೂ, ತುಂಬತಕ್ಕದ್ದು. ಮಕ್ಕಳೇ ಮುಂದಿನ ಸರಕಾರ, ಮುಂದಿನ ನಾಗರಿಕತೆ, ಮುಂದಿನ ಪ್ರಪಂಚದ ಸರ್ವಸ್ವವೆಂದಾಗ ಅವರನ್ನು ತಿದ್ದುವ ಕೆಲಸಕ್ಕಿಂತ ಹಿತವಾದ ಬೆಲೆಯಾದ ಶ್ರೇಷ್ಠವಾದ ಕೆಲಸ ಈ ಪ್ರಪಂಚದಲ್ಲಿ ಬೇರೆ ಯಾವುದಿದೆ ?

— ಗ್ರೇಸ್ ಎರ್ಡ್‌ಮನ್

# ಅನಿಶ್ಚಿತ

ವರ್ತಮಾನ ಹಾಗೂ ಭವಿಷತ್ಕಾಲಗಳ ನಡುವೆ ನಾವು ಡೋಲಾಯಮಾನರಾಗಿ ನಿಂತಿದ್ದೇವೆ. ಮುಂದುವರಿದವರೆಂದು ನಾವು ಕರೆಯುತ್ತಿರುವ ಜ್ಞಾನಶೀಲರೂ ಕೂಡ ಕ್ರಿಯಾತ್ಮಕ ವಿಶ್ವಾಸವನ್ನು ಕಳೆದುಕೊಂಡು ಇಂದು ಹೊಯ್ದಾಡತೊಡಗಿದ್ದಾರೆ. ಕಣ್ಣೆದುರಿಗಿರುವ ಪರಂಪರಾಗತವಾದ ಜಗತ್ತೇ ಸತ್ಯವಾದುದೆಂದು ಅವರ ಭಾವನೆ. ಬೆಳೆಯುತ್ತಿರುವ ಜೀವನದ ಅನಿಶ್ಚಿತತೆಯನ್ನು ಕಂಡು ಅವರು ದಿಗ್ಭ್ರಾಂತರಾಗಿದ್ದಾರೆ. ಭವಿಷತ್ತಿನ ವಿಚಾರವನ್ನು "ಗ್ರಹಿಸಲು" ಅವರು ಅಸಮರ್ಥರೆನ್ನುವ ಬಗ್ಗೆ ಅನುಮಾನಪಡಬೇಕಾದುದಿಲ್ಲ. ಮುಳುಗುತ್ತಿರುವ ಹಡಗದಲ್ಲಿ ಕುಳಿತು ಮದ್ಯಪಾನ ಮಾಡುತ್ತಿರುವವನು "ಸದ್ಯಕ್ಕೆ ಇನ್ನೂ ಮುಳುಗಿಲ್ಲವಲ್ಲ" ಎಂದು ಸಮಾಧಾನಪಡುವಂತೆ ಈ ಜ್ಞಾನಶೀಲರ ಧೋರಣೆಯಾಗಿದೆ.

ಸಮಕಾಲೀನ ದೃಷ್ಟಿಯು ಮಾನವ ಸಹಜವಾದುದು. ನಾಳಿನ ದೃಷ್ಟಿಯಲ್ಲಿ ಸಹಜತೆಗಿಂತಲೂ ಕೃತಕತೆ ಹೆಚ್ಚಾಗಿದೆ. ಆ ದೃಷ್ಟಿಯನ್ನು ನಾವು ಸಂತತವಾದ ಪ್ರಯತ್ನದಿಂದ ಬೆಳಸಿಕೊಂಡು ಬರಬೇಕಾಗಿದೆ. ಅದು ವೈಯಕ್ತಿಕ ಬುದ್ಧಿಮತ್ತೆಯ ಪರಿಣಾಮವಾಗಿರದೆ ಸಾಮಾಜಿಕ ವಾತಾವರಣದ ಪರಿಣಾಮವಾಗಿದೆ. ಮನಸ್ಸಿನ ಪುನರ್ವ್ಯವಸ್ಥೆಗೆ ಮನಸ್ಸಿನಲ್ಲಿಯೇ ವಿರೋಧವಿದೆ. ಬದಲಾವಣೆಯ ವಿರುದ್ಧವಾಗಿ ಮನಸ್ಸಿನ ಶಕ್ತಿಗಳು ಒಟ್ಟುಗೂಡಿ ಬಲವಾದ ಹೋರಾಟವನ್ನು ಹೂಡಿರುತ್ತವೆ. ಈ ಪ್ರವಾಹದ ವಿರುದ್ಧ ಈಸಿ ನಾವು ಜಯಶಾಲಿಗಳಾಗಬೇಕಾಗಿದೆ.

— ಎಚ್. ಜಿ. ವೆಲ್ಸ್

# ಮಾನವ ಬಲಿದಾನ

ವಿಶ್ವದ ಇತಿಹಾಸವನ್ನು ನಾನು "ಮಾನವ ಬಲಿದಾನ" ವೆಂದು ಕರೆಯುತ್ತೇನೆ. ಇತಿಹಾಸಕ್ಕೆ ನಾನು ಕೊಡುವ ಈ ಹೆಸರು ವಿಚಿತ್ರವಾಗಿ ತೋರಬಹುದು. ಆದರೂ ಅದು ಅಕ್ಷರಶಃ ಸತ್ಯವಾಗಿದೆ. ಮುಂದೆ ಜನ್ಮ ವೆತ್ತಿ ಬರುವವರ ಕಲ್ಯಾಣ ಸಾಧನೆಗೆ ಕೊಡುವ ಬಲಿಯೆಂದು ಪ್ರತಿಯೊಂದು ತಲೆಮಾರಿನಲ್ಲಿಯೂ ಮಾನವನನ್ನು ಹಿಂಸೆಗೆ ತುತ್ತು ಮಾಡುವುದು ನಡೆದೇ ಇದೆ. ಇದನ್ನೆಲ್ಲ ಅರಿತ ಮೇಲೆ ನಾವು ಮುಂದಿನ ಪೀಳಿಗೆಗಳ ಸುಖಕ್ಕಾಗಿ ದುಃಖಸೋಸಬೇಕಾಗಿ ಬಂದರೆ ಅದನ್ನು ಅನ್ಯಾಯವೆಂದು ಯಾವ ತರ್ಕ ದಿಂದ ಕರೆಯಲಿಕ್ಕಾದೀತು?

ಕ್ಷಾಮ ಯುದ್ಧ ರೋಗರುಜಿನಗಳಿಂದ ಮಾನವ ಕುಲದ ಪ್ರಗತಿ ಸಾಧ್ಯವಾಗಲಾರದು. ಅವು ಈಗ ಇರಬೇಕಾದ ಅಗತ್ಯವೇನೂ ಇಲ್ಲ. ಬೌದ್ಧಿಕ ಸಂತಾಪದ ಅವಸ್ಥೆಯಲ್ಲಿ ನಾವು ಈಹೊತ್ತು ನಿಂತಿದ್ದೇವೆ. ನಮ್ಮ ಕಲ್ಯಾಣ ಹಾಗೂ ಅಭಿವೃದ್ಧಿ ಪ್ರಕಾಶಮಾನವಾಗಬೇಕಾದರೆ ಆ ಸಂತಾಪದ ಸ್ಥಿತಿಯಿಂದ ನಾವು ಪಾರಾಗಲೇಬೇಕು.

ನಾಳೆ ಎನ್ನುವುದು ಬೇಡ. ಅಮರತ್ವದ ಹಂಬಲವು ಈಗ ಅಳಿಯಲಿ. ಇಂದು ನಮ್ಮ ಆತ್ಮತ್ಯಾಗ ನಡೆಯಬೇಕು. ಸೌಂದರ್ಯ ಹಾಗೂ ಯೌವ್ವನ ಗಳು ಶಾಶ್ವತವಾದವುಗಳಲ್ಲ. ಇಂದು ಇದ್ದು ನಾಳೆ ಅವು ಅಳಿದುಹೋಗು ತ್ತವೆ. ಆಪ್ಯಾಯನ ಸ್ವರೂಪದ ಅಮರತ್ವದ ಭ್ರಮೆಯನ್ನು ಮನುಷ್ಯ ಕೋಟಿಯು ಈಗ ಹರಿದೊಗೆಯಬೇಕು. ಅದು ತೊಲಗಿದಾಗಲೇ ಮಾನ ವತೆಯ ಉದ್ಧಾರದ ಮಾರ್ಗ ತೆರೆಯುವುದು.

"ಮನುಷ್ಯ ಬಲಿದಾನ" ದಿಂದ

# ಆರ್ಥಿಕ ಅವಾಂತರ

ಶ್ರೀಮಂತಿಕೆಯನ್ನು ಸಂಪಾದಿಸುವುದೇ ಅನೇಕರ ಗುರಿಯಾಗಿದೆ. ಅದರಂತೆ ಕೆಲವರು ಶ್ರೀಮಂತರಾಗಿರಬಹುದು. ಆದರೆ ಒಟ್ಟಿನಲ್ಲಿ ಶ್ರೀಮಂತಿಕೆಯ ಸ್ಥಿತಿಮಾತ್ರ ಪ್ರಾಪ್ತವಾಗಿಲ್ಲ. ಶ್ರೀಮಂತಿಕೆಯೆಂದರೆ ವಸ್ತುಗಳ ವಿಪುಲತೆಯೆಂದು ನಾನು ತಿಳಿಯುತ್ತೇನೆ. ಆದರೆ ವಿಪುಲತೆಯ ಬದಲು ದಟ್ಟವಾದ ದಾರಿದ್ರ್ಯವು ಇಂದು ಸಮಾಜವನ್ನು ಆವರಿಸಿಕೊಂಡಿದೆ.

ಶ್ರೀಮಂತಿಕೆ ಬರಬೇಕಾದರೆ ಉತ್ಪತ್ತಿ ಹೆಚ್ಚಾಗಬೇಕು. ದುರ್ದೈವದಿಂದ ಪಿಂಚಣಿದಾರರ ಸಂಖ್ಯೆ ಈ ಹೊತ್ತು ಅಧಿಕವಾಗುತ್ತ ನಡೆದು ಯಂತ್ರಕ್ಕೂ ಮನುಷ್ಯರಿಗೂ ಕೂಡಿಯೇ ಆಲಸ್ಯತನ ಬಂದಿದೆ. ಉಪಯುಕ್ತವಾಗಬಹುದಾದ ಯೌವ್ವನವು ಸಮಾಜವಿರೋಧಿ ಚಟುವಟಿಕೆಗಳಲ್ಲಿ ಹಾಳಾಗಿಹೋಗತೊಡಗಿದೆ. ಶ್ರೀಮಂತಿಕೆಯೇ ನಮ್ಮೆಲ್ಲರ ಗುರಿಯಾಗಿದ್ದರೂ ನಾವು ದಾರಿದ್ರ್ಯವನ್ನೂ ದಿವಾಳಿತನವನ್ನೂ ಆಹ್ವಾನಿಸುತ್ತ ನಿಂತಿದ್ದೇವೆ.

ಉತ್ಪತ್ತಿಯ ಸೂತ್ರಧಾರಿಗಳಾದವರು ಹಿಂದಿನ ದರೋಡೆಗಾರರ ಗುಂಪಿನ ನಾಯಕರಂತಾಗಿದ್ದಾರೆ. ಸಮಾಜದ ಇಡೀ ಜೀವನವೇ ಅವರ ನಿಯಂತ್ರಣಕ್ಕೊಳಗಾಗಿದೆ. ಒಬ್ಬನು ದುಡಿಯದಿದ್ದರೂ ಆತನಿಗಾಗಿ ಇನ್ನೊಬ್ಬರು ದುಡಿಯಬೇಕೆಂಬುದೇ ಇಂದಿನ ಸಮಾಜ ವ್ಯವಸ್ಥೆಯಾಗಿದೆ. ಉತ್ಪಾದಕ ಕಾರ್ಯ ಮಾಡದಂಥವನಿಗೇ ಮನ್ನಣೆ ಕೊಡುವುದು ಆರಂಭವಾಗಿದೆ. ಬೌದ್ಧಿಕ ಚಟುವಟಿಕೆಗಿಂತ ಮಾತು ಹೆಚ್ಚಾಗಿದೆ. ಸವಿಮಾತಿನ ವಾಕ್‌-ಪ್ರಭೆಗೆ ಜನ ಸಾಮಾನ್ಯರು ಬಲಿಯಾಗತೊಡಗಿದ್ದಾರೆ.

ಸುತ್ತಲೂ ಶಕ್ತಿಯ ಆಳಿಕೆಯ ಪ್ರಾಬಲ್ಯ ನಡೆದಿದೆ. ರಾಜಕೀಯ ನಾಯಕರು ತಮ್ಮ ವಾಕ್ಪಟುತ್ವದಿಂದ ಜನತೆಯನ್ನು ವಿಭಜಿಸಿ ಪಕ್ಷ-ಪಂಗಡಗಳಲ್ಲಿ ನೂಕಲಾರಂಭಿಸಿದ್ದಾರೆ. ಆದರೂ ಅದಕ್ಕೆ ಆದರ್ಶದ ಹೊದಿಕೆಯನ್ನು ತೊಡಿಸುವುದನ್ನು ಮಾತ್ರ ಅವರು ಮರೆತಿಲ್ಲ.

— ಅನ್‌ವಿನ್

# ಮಾನಸಿಕ ಘರ್ಷಣೆ

ಸುತ್ತು ಕಡೆಗಳಲ್ಲಿಯೂ ಪ್ರತಿಗಾಮಿತ್ವವು ಮುಖ ಮುಂದೆಮಾಡಿದೆ. ಅದನ್ನು ಒಪ್ಪುವ ಹೃದಯಗಳು ಜಗತ್ತಿನಲ್ಲೆಲ್ಲ ತುಂಬಿಕೊಂಡಿವೆ. ಕಾಲದ ಈ ಮಹಾ ಆಹ್ವಾನವನ್ನು ಸ್ವೀಕರಿಸಲು ಅವು ಸಿದ್ಧವಾಗಿ ನಿಂತಿವೆಯೆನ್ನ ಬಹುದು.

ಜಗತ್ತಿನ ಇಂದಿನ ಮಾನಸಿಕ ಜೀವನದಲ್ಲಿ ಪರಸ್ಪರ ವಿರೋಧವಾದ ಎರಡು ಶಕ್ತಿಗಳನ್ನು ನಾವು ಕಾಣುತ್ತಿದ್ದೇವೆ. ಹಿಂದೆ ಅಥವಾ ಮುಂದೆ ಚಲಿಸದಂಥ ಪೂರಣೆಯ ಶಕ್ತಿಯೂ ಒಂದಿದೆ. ಅದನ್ನು "ನೈತಿಕ ನಿರ್ಲಕ್ಷ್ಯ" ವೆಂದು ಸಂಬೋಧಿಸಿದರೆ ಸರಿಯಾಗಬಹುದು. ಅಚೇತನವಾದ ಪ್ರತಿಗಾಮಿ ಶಾಂತಿಯಾಗಲಿ, ಚೇತನದಾಯಕವಾದ ಕ್ರಿಯಾತ್ಮಕ ಶಾಂತಿ ಯಾಗಲಿ–ಎರಡರ ಬಗೆಗೂ ಅದಕ್ಕೆ ಅಷ್ಟೇ ಅನಾದರ!

ಚೇತನದಾಯಕವಾದ ಆ ಶಾಂತಿಯ ಆಗಮನಕ್ಕೆ ಅಚೇತನವಾದ ಪ್ರತಿಗಾಮಿ ಶಕ್ತಿಯು ಅಡ್ಡವಾಗಿ ನಿಂತಿರುವುದರಿಂದಲೇ ಜಗತ್ತು ಹಿಂಸೆ ಹಾಗೂ ಅನಾಯಕತ್ವದ ಕಡೆಗೆ ಸಾಗಿದೆ.

ಇದ್ದದ್ದೇ ಸರಿಯೆನ್ನುವ ಪ್ರಾಚೀನ ಮಾರ್ಗ ಹಾಗೂ ಕ್ರಿಯಾತ್ಮಕ ಪುನರ್ವ್ಯವಸ್ಥೆಯನ್ನು ಹಂಬಲಿಸುವ ನೂತನಮಾರ್ಗ ಇವೆರಡರಲ್ಲಿ ಉಂಟಾಗಿ ರುವ ಘರ್ಷಣೆಯಿಂದ ಮನುಷ್ಯನಲ್ಲಿರುವ ಮೃಗಸ್ವಭಾವಕ್ಕೆ ಸ್ವಾತಂತ್ರ್ಯ ಕೊಟ್ಟಂತಾಗಿದೆ. ಹೊಸ ಶಾಂತಿಯು ಹಳೆಯದನ್ನು ಸೋಲಿಸಿ ಪೂರ್ಣ ವಿಜಯಶಾಲಿಯೆಂದು ಪ್ರಕಟವಾದಾಗ ಆ ಮೃಗಸ್ವಭಾವವನ್ನು ಅಂಕಿತಕ್ಕೆ ತಂದು ಒಂದು ಶಿಸ್ತಿಗೆ ಒಳಪಡಿಸಬಹುದು.

ಮುಮ್ಮುಖವಾದ ಈ ಹೋರಾಟವು ವಿಚಾರಶೀಲ ಮನುಷ್ಯರೆಲ್ಲ ರಲ್ಲಿಯೂ ಇಂದು ನಡೆದಿದೆ. ಇದನ್ನು ನಮ್ಮ ಕಾಲದ "ಧಾರ್ಮಿಕ ಹೋರಾಟ" ವೆನ್ನಬಹುದು. ವಿಚಾರಶೀಲರು ಈಗಲೇ ಎಚ್ಚರವಹಿಸಿ ನಿಲ್ಲುವ ಪ್ರಯತ್ನ ಮಾಡಲಿ. ಇಲ್ಲದಿದ್ದರೆ ಬೀಳುವುದು ಮಾತ್ರ ನಿಶ್ಚಿತ.

— ಎಚ್. ಜಿ. ವೆಲ್ಸ್

# ಪ್ರತಿಫಲ

ಒಬ್ಬನಿಗೋಸ್ಕರ ಒಂದು ಒಳ್ಳೆಯ ಕೆಲಸವನ್ನೇನಾದರೂ ಮಾಡಿದ್ದರೆ ತಮ್ಮಿಂದ ನಡೆದ ದಯೆಯು ಒಂದು ಶ್ರೇಷ್ಠ ಕಾರ್ಯ, ಎಂದು, ಅದನ್ನು ತಮ್ಮ ನೆನಪಿನ ಪುಸ್ತಕದಲ್ಲಿ ಗುರುತುಮಾಡಿ ಇಟ್ಟುಕೊಳ್ಳುವ ಜನರಿದ್ದಾರೆ.

ಈ ರೀತಿ ಗುರುತು ಬರೆದಿಟ್ಟುಕೊಳ್ಳದಂಥ ಇನ್ನು ಬೇರೆ ಕೆಲವು ಜನರು ಜೀವನದಲ್ಲಿ ಕಂಡುಬರುತ್ತಿರುವರಾದರೂ ಮೊದಲಿನವರಿಗಿಂತ ಅವರೇನೂ ಹೆಚ್ಚಿನವರಲ್ಲವೆಂದೇ ನನ್ನ ಭಾವನೆ. ತಮ್ಮ ಕೃಪೆಗೆ ಪಾತ್ರನಾದವನನ್ನು ಸಾಲಗಾರನೆಂದು ಅವರು ತಮ್ಮ ಮನಸ್ಸಿನಲ್ಲಿ ಆಗಾಗ ನೆನೆದುಕೊಳ್ಳುವುದುಂಟು.

ಇವೆರಡು ವರ್ಗಗಳಿಗೆ ಸೇರದಂಥ ಮೂರನೆಯ ಇನ್ನೊಂದು ಜನ ವರ್ಗವೂ ಈ ಜಗತ್ತಿನಲ್ಲಿದೆ. ಹಣ್ಣು ಕೊಡುವ ದ್ರಾಕ್ಷೆಯ ಬಳ್ಳಿಯಂತೆ ಅವರು ಇಲ್ಲಿ ಬದುಕಿ ಹೋಗುತ್ತಾರೆ. ಇನ್ನೊಂದನ್ನೆಣಿಸದೆ ಹಣ್ಣು ಕೊಡುವುದೊಂದೇ ದ್ರಾಕ್ಷೆಯ ಬಳ್ಳಿಯ ಧರ್ಮವಾಗಿರುವಂತೆ ಒಳ್ಳೆಯ ಕಾರ್ಯವನ್ನೆಸಗುವುದೇ ಉತ್ತಮರ ಜೀವನಧರ್ಮವಾಗಿದೆ.

ಜೇನು ಕಲೆಹಾಕಲು ಹೊರಟ ಜೇನ್ನೊಣವು "ನೋಡಬನ್ನಿರಿ" ಎಂದು ಯಾರಿಗೇನೂ ಔತಣ ಹೇಳುವುದಿಲ್ಲ. ಇನ್ನೊಬ್ಬನಿಗೆ ತಾನು ಮಾಡುವ ಅಲ್ಪ ಸಹಾಯವನ್ನು ಕೊಂಬು ಕಹಳೆ ಹಿಡಿದು ಮನುಷ್ಯನೇಕೆ ಹೇಳಿಕೊಳ್ಳಬೇಕು? ಪ್ರತಿಫಲದ ಅಪೇಕ್ಷೆ ಮನುಷ್ಯನಲ್ಲಿ ಬರಬಾರದು. ನೋಡುವ ಕಣ್ಣಿಗೆ, ನಡೆಯುವ ಕಾಲಿಗೆ ಯಾವ ಪ್ರತಿಫಲವಿದೆ ?

— ಮಾರ್ಕಸ್ ಅರೇಲಿಯಸ್

# ಜಗತ್ತಿನ ಚಿತ್ರ

ಕಾರ್ಗತ್ತಲೆ ತುಂಬಿದ ಅನಿಶ್ಚಿತ ಜಗತ್ತಿನತ್ತ ನಾವು ಸಾಗಿದ್ದೇವೆ. ಸುತ್ತುಮುತ್ತಲೂ ವೈರ ದ್ವೇಷಗಳು ತಾಂಡವವಾಡತೊಡಗಿವೆ. ಜಗತ್ತಿನ ಒಂದು ತುದಿಯಿಂದ ಇನ್ನೊಂದು ತುದಿಯವರೆಗೂ ಶಸ್ತ್ರಗಳ ಮಸೆದಾಟ ನಡೆದಿದೆ. ಇದನ್ನೆಲ್ಲ ನೋಡಿದಾಗ ಮಾನವತೆಯ ಬಗ್ಗೆ ಸಂದೇಹ ಉಂಟಾಗುತ್ತದೆ.

ನಾವು ವ್ಯವಹರಿಸುತ್ತಿರುವ ಯಂತ್ರಗಳಿಗೆ ಹೃದಯದ ಭಾವನೆ ಯಾವುದೂ ಇಲ್ಲ. ಅವುಗಳ ಆಳೆಂಬಂತೆ ನಮ್ಮ ಸ್ಥಿತಿಯಾಗಿದೆ. ಮನುಷ್ಯ ಭಾವನೆಗಳು ಈಗ ನಮಗೆ ಗೋಚರವಾಗುವಂತಿಲ್ಲ. ಮಾನವ ಹೃದಯದ ದುಃಖವನ್ನು ನಾವು ಅರಿಯದವರಾಗಿದ್ದೇವೆ. ಹೃದಯಗಳಲ್ಲಿ ಹೊತ್ತಿಕೊಂಡಿರುವ ಉರಿ ನಮಗೆ ಅರ್ಥವಾಗಲಾರದು. ನಮ್ಮನ್ನು ಸುತ್ತುವರಿದುಕೊಂಡಿರುವ ದುಷ್ಟ ಶಕ್ತಿಗಳನ್ನು ಸದೆಬಡಿಯಲಾರೆವೆನ್ನುವ ಸೋಲಿನ ನಿರ್ವಿಣ್ಣ ಭಾವನೆ ನಮ್ಮ ಮನಸ್ಸಿನಲ್ಲಿ ಒಮ್ಮೊಮ್ಮೆ ಸುಳಿದುಹೋಗುತ್ತದೆ. ಯಂತ್ರಗಳ ಬಾಯಲ್ಲಿ ಸಿಕ್ಕು ಅಸಹಾಯರಾಗುತ್ತಿರುವಂತೆ ನಮಗೆ ಭಾಸವಾಗತೊಡಗಿದೆ.

ಜಗತ್ತು ಇಂದು ಸಂಪೂರ್ಣವಾಗಿ ಸ್ವಾರ್ಥಕ್ಕೆ ಅಧೀನವಾಗಿಹೋಗಿದೆ. ತನ್ನ ನಾಚಿಗೇಡಿತನದ ಸ್ವರೂಪವನ್ನು ಅರಿಯದಷ್ಟು ಅದು ಕುರುಡಾಗಿದೆ. ನಾಗರಿಕತೆಯನ್ನು ಕಾಯ್ದುಕೊಂಡು ಬಂದಿರುವ ಪ್ರೇಮ, ಸತ್ಯ, ಮುಂತಾದ ಗುಣಗಳನ್ನು ತನ್ನೊಳಗೆ ಅಳವಡಿಸಿಕೊಳ್ಳುವ ಆಸೆಯನ್ನು ವ್ಯಕ್ತ ಮಾಡದಷ್ಟು ಅದು ದುರ್ಬಲವಾಗಿದೆ.

ಪ್ರಪಂಚದ ಬೇರೆ ಬೇರೆ ಭಾಗಗಳಲ್ಲಿರುವ ಕೆಲ ಜನರು ಈ ಕಾರ್ಗತ್ತಲೆ ಹಾಗೂ ಅರಾಜಕತೆಗಳಿಂದ ಪಾರಾಗುವ ಹಾದಿಯನ್ನು ಹುಡುಕತೊಡಗಿದ್ದಾರೆ. ಪ್ರೇಮ, ವಿವೇಕ ಹಾಗೂ ಪರಸ್ಪರ ತಿಳಿವಳಿಕೆಯುಳ್ಳಂಥ ಜಗತ್ತನ್ನು ಕಟ್ಟುವುದು ಅಸಾಧ್ಯವೇ ಎಂದು ಅವರು ಕೇಳುತ್ತಿದ್ದಾರೆ.

— ಡಾ॥ ಸರ್ವಪಳ್ಳಿ ರಾಧಾಕೃಷ್ಣನ್

# ನಿರಾಶಾವಾದ

ನಿರಾಶಾವಾದವು ಆಗಾಗ ವ್ಯಕ್ತಿಯ ಜೀವನವನ್ನೂ ಸಮಾಜದ ಜೀವನವನ್ನೂ ಆವರಿಸಿಕೊಳ್ಳುತ್ತದೆ. ಭವಿಷತ್ತನ್ನು ಕುರಿತ ಭಯ, ಅಂಜಿಕೆ, ನಿರಾಸೆ ಮುಂತಾದವುಗಳೆಲ್ಲವನ್ನೂ ಇತಿಹಾಸವು ಚಿತ್ರಿಸುತ್ತಲೇ ಬಂದಿದೆ. ಈ ನಿರಾಸೆಯ ನೆರಳು ಕೆಲ ಸಮಯಗಳಲ್ಲಿ ವಿಶೇಷ ದಟ್ಟವಾಗಿ ತೋರ ಬಹುದು. ಮತ್ತೆ ಕೆಲ ಸಮಯಗಳಲ್ಲಿ ಗಾಳಿಯಲ್ಲಿ ತೂರಿಹೋಗುವ ತಿಳಿ ಮಂಜಿನಂತೆ ಹಗುರಾಗಿ ತೋರಬಹುದು. ನಿರಾಶಾವಾದದ ಪ್ರಮಾಣವು ನಮ್ಮ ಭಾವನೆ ಹಾಗೂ ತಿಳಿವಳಿಕೆಗಳನ್ನೇ ಹೆಚ್ಚಾಗಿ ಅವಲಂಬಿಸಿದೆ.

ಜೀವನದ ಪ್ರತಿಯೊಂದು ಕಾರ್ಯಕ್ಷೇತ್ರದಲ್ಲಿಯೂ ಗಳಿಗೆ ಗಂಡಾಂತರ ಗಳಿವೆ. ಅವನ್ನೆದುರಿಸಬಹುದಾದ ಸಂಭವವನ್ನು ಗ್ರಹಿಸಿಕೊಂಡು ತಕ್ಕ ಮಾನಸಿಕ ಹಾಗೂ ಬೌದ್ಧಿಕ ಸಿದ್ಧತೆಗಳನ್ನು ಮುಂಚಿತವಾಗಿಯೇ ಮಾಡಿ ಕೊಳ್ಳಬೇಕು. ನಾವು ನಮ್ಮ ದಾರಿಯ ಮಧ್ಯಬಿಂದುವನ್ನು ಕಂಡುಕೊಂಡರೆ ದಾರಿಯಿಂದ ಜಾರಿಹೋಗಬಹುದಾದ ಸಂಭವ ಉಳಿಯಲಾರದು. ಅದನ್ನು ಅರಿತುಕೊಳ್ಳುವುದಕ್ಕೆ ಜ್ಞಾನ ಬೇಕು. ಅಂತೆಯೇ ನಿರ್ಧಾರ ಬೇಕು.

ನೈತಿಕ ಹಾಗೂ ಬೌದ್ಧಿಕ ಜಾಗೃತಿಗೆ ಪ್ರತಿಯಾಗಿ ನಿಲ್ಲುವಂಥ ಪರಿ ಹಾರಗಳು ಜೀವನದಲ್ಲಿ ಇಲ್ಲವೆಂದು ನಿರ್ವಿವಾದವಾಗಿ ಹೇಳಬಹುದು. ಮನುಷ್ಯನ ನೀತಿ ಹಾಗೂ ಬೌದ್ಧಿಕ ಶಕ್ತಿಗಳು ಸದಾ ಜಾಗೃತವಾಗಿರುವು ದಾದರೆ ನಿರಾಶಾವಾದವು ನಿಲ್ಲಲಾರದು. ನಿರಾಶಾವಾದವು ಮನುಷ್ಯನ ದುರ್ಬಲತೆಯಲ್ಲಿಯೇ ಆಶ್ರಯವನ್ನು ಹುಡುಕಿಕೊಳ್ಳುತ್ತದೆ.

— "ನೀತಿ ಮತ್ತು ರಾಜನೀತಿ"ಯಿಂದ

# ಯೌವ್ವನ

ದುರಂತ ಮುಟ್ಟದ ಜೀವನವೆಂದು ಯೌವ್ವನವನ್ನು ವರ್ಣಿಸಿದ್ದಾರೆ. ಸುಖಲೋಲುಪತೆಯಂತೆ ತ್ಯಾಗದಲ್ಲಿಯೂ ಸಂಪೂರ್ಣ ತಾದಾತ್ಮ್ಯ ಹೊಂದುವುದು ಯೌವ್ವನದ ವಿಶಿಷ್ಟ ಗುಣವಾಗಿವೆ. ಶೀಘ್ರ ಸುಖ ಶೀಘ್ರ ದುಃಖ, ಶೀಘ್ರ ನಗೆ ಶೀಘ್ರ ಕಣ್ಣೀರು, ಶೀಘ್ರ ಧೈರ್ಯ ಶೀಘ್ರ ಭಯ, ಶೀಘ್ರ ನಿರ್ಧಾರ ಶೀಘ್ರ ಸಂದೇಹ ಇವೆಲ್ಲವೂ ಯೌವ್ವನದ ಮುಖ ಗಳೆಂದು ಹೇಳಬಹುದು.

ಯೌವ್ವನವು ಸುಖದ ಕಾಲವೆಂದು ಒಪ್ಪಿಕೊಳ್ಳುವುದು ಯೋಗ್ಯವೆ ನಿಸಲಾರದು. ಯೌವ್ವನವು ವೈವಿಧ್ಯಮಯವಾಗಿದೆಯೇ ವಿನಾ ಸುಖ ಮಯವಾಗಿಲ್ಲ. ಯೌವ್ವನಕ್ಕಿಂತಲೂ ಯೌವ್ವನದ ಅನುಭವಗಳು ಹೆಚ್ಚು ರಸಮಯವಾಗಿವೆ. ಯಾವ ದೃಷ್ಟಿಯಿಂದ ನೋಡಿದರೂ ಯೌವ್ವನದ ಕಾಲವು ಶಾಂತಿಯ ಕಾಲವಲ್ಲ. ಸಂದೇಹಕ್ಕೆ ಯೌವ್ವನವು ಒಂದು ದೊಡ್ಡ ಅವಕಾಶವಾಗಿದೆಯೆನ್ನಬಹುದು.

ಯೌವ್ವನಕ್ಕೆ ಭವಿಷತ್ತಿನ "ನಾಳೆ" ಎಂಬುದಾಗಲಿ ಅಥವಾ ಹಿಂದೆ ಅನುಭೋಗಿಸಿದ ಘೋರ ದುರಂತಗಳ ಕಲ್ಪನೆಯಾಗಲಿ ಯಾವುದೂ ಇರು ವುದಿಲ್ಲ. ಯೌವ್ವನದ ಅದೂರದೃಷ್ಟಿಗೆ ಅದರ ಅಲ್ಪ ಅನುಭವವೇ ಕಾರಣ ವಾಗಿದೆ. ಯೌವ್ವನಕ್ಕೆ ಇರುವ ಜ್ಞಾನವೆಂದರೆ ಕೇವಲ ಪುಸ್ತಕ–ಜ್ಞಾನ.

ಮೇಲೆ ಹೇಳಿದ ಮುಖಗಳಲ್ಲದೆ ಯೌವ್ವನಕ್ಕೆ ಇನ್ನೊಂದು ಮುಖವೂ ಇದೆ. ಅದು ಸೌಂದರ್ಯದ ಮುಖ. ಯೌವ್ವನದ ಮುಖವು ಸ್ವಾರ್ಥ ಮೂಲವಾದುದಲ್ಲ. ಆ ಪ್ರೇಮವು ಭಕ್ತಿಯ ಅತ್ಯುಚ್ಚಸ್ವರೂಪಕ್ಕೆ ಸಮೀ ಪವಾದುದು. ಸ್ವಂತ ಸೌಖ್ಯದ ಆಚೆಗೆ ಆದರ್ಶದ ಸೀಮೆ ಇದೆ. ಆ ಸೀಮೆಯ ದರ್ಶನವನ್ನು ಯೌವ್ವನವು ಗ್ರಹಣಮಾಡಿಕೊಳ್ಳಬಲ್ಲದು. ಆ ಕ್ರಿಯೆಯು ಆತ್ಮದ ಚಟುವಟಿಕೆಗಳ ಶಕ್ತಿ ಸಾಮರಸ್ಯದ ಸಾರ– ಸರ್ವಸ್ವವಾಗಿದೆ.

— "ವಿಚಾರದ ಸಾಹಸ" ದಿಂದ

# ಶ್ರೇಷ್ಠ ಜೀವನ

ಜೀವನವು ಒಳ್ಳೆಯದು, ಪವಿತ್ರವಾದುದು, ಬದುಕಬಹುದಾದುದು ಎನ್ನುವ ರೀತಿಯಲ್ಲಿ ನಾವು ನಡೆದುಕೊಳ್ಳುವುದಾದರೆ ಆ ತಿಳಿವಳಿಕೆ ಕ್ರಮೇಣ ಬಲಗೊಳ್ಳುತ್ತ ಕೊನೆಯಲ್ಲಿ ನಂಬಿಗೆಯಾಗಿ ಪರಿಣಮಿಸುವುದು.

ಜೀವನವು ನಗೆ–ನೋವು, ಶಿಷ್ಟ–ದುಷ್ಟ, ಸಿರಿವಂತಿಕೆ–ಬಡತನ, ಹೀಗೆ ಸುಖದುಃಖಗಳ ಸರಿಬೆರಕೆಯಾಗಿದೆ. ನಮ್ಮ ಸಹನಶೀಲತೆಯನ್ನು ಧೃಡಪಡಿಸಲು ದುಃಖ ಉಂಟಾಗಿದೆ. ನಮಗೆ ಪರಿಪೂರ್ಣತೆಯ ಮೆರಗು ಕೊಡಲು ನೋವು ನಿರ್ಮಾಣಗೊಂಡಿದೆ. ಐಶ್ವರ್ಯದ ವಿಲಾಸ ಜೀವನವು ಮನುಷ್ಯನನ್ನು ದುರ್ಬಲಗೊಳಿಸುವುದೆಂದು ನಮ್ಮ ನೆನಪಿಗೆ ತಂದುಕೊಡಲು ಬಡತನ ಹುಟ್ಟಿಕೊಂಡಿದೆ. ದುಷ್ಟವಾದುದು ನಮ್ಮ ಪ್ರಯತ್ನದಿಂದ ಶಿಷ್ಟ ವಾಗಬೇಕು.

ಜಗತ್ತನ್ನು ಸರಿಪಡಿಸಿದ ಜನ ಎಂಥವರು? ಕಷ್ಟ–ಕಾರ್ಪಣ್ಯ, ದುಃಖ-ದುಮ್ಮಾನಗಳನ್ನು ಅನುಭವಿಸಿ ಅವರು ಮಾನವತೆಯ ಕಲ್ಯಾಣಕ್ಕಾಗಿ ತಮ್ಮ ಜೀವನವನ್ನೇ ಧಾರೆಯರೆದರು. ಅನ್ಯಾಯ, ಆಪತ್ತು, ಕ್ರೌರ್ಯಗಳಿವೆ ಯೆಂದು ಅವರು ಎದೆಗೆಡಲಿಲ್ಲ. ಲೋಕದ ಸಂಕಟಗಳನ್ನು ಕಂಡು ಅವರ ಶಕ್ತಿಗೆ ಹೊಸ–ಮೈ ಬಂದಂತಾಯಿತು.

ಮಾಡುವ ಕೆಲಸ ಸಣ್ಣದು ಅಥವಾ ದೊಡ್ಡದು ಎನ್ನುವ ಕಾರಣದಿಂದ ಅದರ ಬೆಲೆ ನಿರ್ಧಾರವಾಗುವುದಿಲ್ಲ. ಅದನ್ನು ಮಾಡುವುದಕ್ಕೆ ನಾವು ಕೊಡುವ ಮನಸ್ಸು ಹಾಗೂ ಕಳಕಳಿಯಿಂದ ಅದು ನಿರ್ಧಾರವಾಗುವುದು. ಜೀವನವನ್ನು ಉಪೇಕ್ಷಿಸದೆ ಅದೊಂದು ಸೇವೆಮಾಡಲು ದೊರಕಿದ ಅವಕಾಶವೆಂದು ತಿಳಿದು ಯಾರು ನಡೆಯುತ್ತಾರೆಯೋ ಅವರು ದೊಡ್ಡವರು. ಸರಿಯಾಗಿ ಬದುಕುವದೇ ಶ್ರೇಷ್ಠ ಜೀವನ.

— ಸರ್. ಎನ್. ಜಿ. ಚಂದಾವರಕರ

# ಬಂಧನ-ಬಿಡುಗಡೆ

ಇತಿಹಾಸದ ರಕ್ತರಂಜಿತ ವಿನಾಶದ ಕಡೆಗೆ ನಾವು ನೋಡಿದಾಗ ನಮ್ಮ ಮನಸ್ಸಿನಲ್ಲಿ ಒಂದು ದುರ್ದಮನೀಯವಾದ ಭಾವನೆ ಸುಳಿದು ಹೋಗುತ್ತದೆ. ಕರುಣೆಯಿಲ್ಲದ ಸ್ವಾರ್ಥಿಗಳ ಹಿಡಿತಕ್ಕೆ ಸಿಕ್ಕು ಜನಸಾಮಾನ್ಯರು ನರಳುವುದು ಅವ್ಯಾಹತವಾಗಿ ಒಂದೇಸವನೆ ನಡೆದೇ ಇದೆ. ಒಂದು ಕ್ರೌರ್ಯದಿಂದ ಬಿಡುಗಡೆಯಾದರೆನ್ನುವಷ್ಟರಲ್ಲಿಯೇ ಅವರು ಇನ್ನೊಂದು ಕ್ರೌರ್ಯಕ್ಕೆ ಬಲಿಯಾಗಿರುವುದನ್ನು ನಾವು ಕಾಣುತ್ತಿದ್ದೇವೆ.

ಆಚಾರ್ಯರು ಹಾಕಿ ಕೊಟ್ಟ ರೂಢಿಮೌಢ್ಯ ಹರಿದುಹೋಗುವುದರೊಳಗಾಗಿ ಇನ್ನೊಂದು ಬಗೆಯ ಜನ ಮುಂದೆ ಬಂದು ಜನಸಾಮಾನ್ಯರ ಮೇಲೆ ಹಿಂಸೆ ಕ್ರೌರ್ಯ ಅನ್ಯಾಯಗಳಿಗೆ ಆರಂಭ ಮಾಡುತ್ತಾರೆ. ಅವರನ್ನು ಬೇಟೆಯ ಕ್ರೂರ ನಾಯಿಗಳೆಂದು ಬಗೆದು ದೊರೆಗಳು ಹಿಂದಿನಂತೆ ಇನ್ನೊಂದು ನಾಯಿ ಪಡೆಯ ಮೇಲೆ ಇಂದು ಹರಿಬಿಡಲಾರರು. ದೊರೆಗಳು ಈಗ ಆ ರೀತಿ ಮಾಡಲಾರರೆಂದಾಕ್ಷಣ ಅವರ ಪಾಡು ಮಾತ್ರ ಬದಲಾಗಲಿಲ್ಲ. ಅಂದು ದೊರೆಗಳು ಮಾಡುತ್ತಿದ್ದುದನ್ನೇ ಇಂದಿನ ರಾಜಕಾರಣಿಗಳು ಮಾಡುತ್ತಿದ್ದಾರೆ. ಆಸ್ಟ್ರಿಯಾದ ಯುವರಾಜ ರುಡಾಲ್ಫ ಕರೆದಂತೆ ಅರಸೊತ್ತಿಗೆಯು "ಪ್ರಚಂಡ ಹಾಳು ಕೊಂಪೆ"ಯಾಗಿದೆ. ಆದರೆ ಜನ–ಸಾಮಾನ್ಯರು ಆ ಹಾಳುಧೂಳಿನ ಮೇಲೆ ನಿರಂಕುಶಾಧಿಕಾರದ ಹೊಸ ಹಂದರವನ್ನು ನಿರ್ಮಿಸಲು ಸರ್ವ–ಸತ್ತಾಧಿಕಾರಿಗಳಿಗೆ ಅವಕಾಶವನ್ನು ಕೊಡುತ್ತಲೇ ಇದ್ದಾರೆ.

ಇದನ್ನೆಲ್ಲ ವಿಚಾರಿಸಿದಾಗ ಒಮ್ಮೊಮ್ಮೆ ಹೀಗೆ ವಿಚಾರ ಬರುತ್ತದೆ: "ವಿವೇಚನೆಯಿಲ್ಲದ ಸ್ವಂತ ಪರಿಜ್ಞಾನವಿಲ್ಲದ ಈ ಜನರನ್ನು ರಕ್ಷಿಸುವುದರಿಂದಾಗುವ ಪ್ರಯೋಜನವೇನು? ಮೋಸಕ್ಕೆ ಬಲಿಯಾಗುವುದೇ ಅವರ ಹಣೆಬರೆಹವಾಗಿದೆ." ಆದರೆ ನೈಸರ್ಗಿಕವಾದುದೂ ವಿಚಾರಶೀಲವಾದುದೂ ಆಗಲೇಬೇಕೆಂದು ನಾವು ಮಾನವತೆಯ ಅಂತಿಮ ವಿಜಯದಲ್ಲಿ ವಿಶ್ವಾಸವನ್ನು ತಾಳುವುದಾದರೆ ಈ ಬಗೆಯ ಸಂದೇಹ ನಿರಾಸೆಗಳಿಗೆ ಅವಕಾಶ ಉಳಿಯಲಾರದು.

— ಹ್ಯಾಮಿಲ್ಟನ್ ಫಾಯಿಫ್

# ದಿನದ ಕೊನೆ

ನಿದ್ದೆ ಬಂದು ತಾನಾಗಿಯೇ ನಿನ್ನ ಕಣ್ಣೆವೆಗಳನ್ನು ಮುಚ್ಚಬೇಕೆಂದು ನೀನು ಅಪೇಕ್ಷೆಪಡುವೆಯಾ ? ದಿನದ ನಿನ್ನ ಎಲ್ಲ ಕೃತಿಗಳನ್ನೂ ಅಳೆದು ಲೋಪದೋಷಗಳ ಲೆಕ್ಕಾಚಾರ ಮಾಡಿಕೊಳ್ಳುವವರೆಗೂ ನೀನು ನಿದ್ದೆಯನ್ನು ಅಪೇಕ್ಷಿಸಬೇಡ. ಬಲುಮೆಯಿಂದ ಬಂದರೂ ಅದನ್ನು ಬಾಗಿಲಾಚೆಗೆ ನಿಲ್ಲಿಸು.

ಮಲಗುವ ಮೊದಲು ನೀನು ಪ್ರತಿರಾತ್ರಿಯೂ ನಿನ್ನ ಮನಸ್ಸಿಗೆ ಕೇಳಿಕೊಳ್ಳು: "ನಾನು ಈ ದಿನ ಮಾಡಿರುವುದೇನು ? ತಪ್ಪಿರುವುದೇನು ? ಮಾಡಬೇಕಾದದ್ದರಲ್ಲಿ ಯಾವುದನ್ನು ಬಿಟ್ಟದ್ದೇನೆ ?"

ಈ ಪರೀಕ್ಷೆಯಲ್ಲಿ ನೀನು ತಪ್ಪುಮಾಡಿರುವಂತೆ ನಿನಗೆ ಕಂಡುಬಂದರೆ ಉಗ್ರಪ್ರಾಯಶ್ಚಿತ್ತ ನಿನ್ನ ಮನಸ್ಸಿನಲ್ಲಿ ನಡೆಯಲಿ. ನಿನ್ನಿಂದ ಒಳ್ಳೆಯ ಕಾರ್ಯವೇನಾದರೂ ಘಟಿಸಿದ್ದರೆ ನಿಶ್ಚಿಂತೆಯಿಂದ ನಿದ್ದೆಹೋಗು. ಸಂತೋಷವಾಗಿ ನಿದ್ದೆಮಾಡಲು ಆಗ ನಿನಗೆ ಅಧಿಕಾರವೂ ಇರುತ್ತದೆ.

— ಪ್ಯಾಥೆಗೊರಸ್

# ಪ್ರಜಾಪ್ರಭುತ್ವದ ಚಿತ್ರ

ನೌಕಾಪಡೆಯ ಕಪ್ತಾನನೊಬ್ಬನಿದ್ದಾನೆ. ಆತನು ಎತ್ತರವಾಗಿಯೂ ಬಲಿಷ್ಠನಾಗಿಯೂ ಇದ್ದಾನೆ. ಆದರೆ ಆತನ ದೃಷ್ಟಿ ಮಾತ್ರ ಸ್ವಲ್ಪ ಮಂದವಾಗಿದೆ. ಕಿವಿಗಳೂ ಸರಿಯಾಗಿ ಕೇಳಿಸಲಾರವು. ಅಲ್ಲದೆ ಆತನ ನೌಕಾಜ್ಞಾನವೂ ಅಷ್ಟೊಂದು ಮೇಲ್ಮಟ್ಟದ್ದಲ್ಲ.

ಚುಕ್ಕಾಣಿ ತನ್ನ ಕೈಯಲ್ಲಿರಬೇಕೆಂದು ಪ್ರತಿಯೊಬ್ಬ ನಾವಿಕನೂ ಜಗಳಕ್ಕೆ ಮೊದಲು ಮಾಡುತ್ತಾನೆ. ತನ್ನೊಬ್ಬನಿಗೇ ಆ ವಿಶಿಷ್ಟ ಜ್ಞಾನ ಇದೆಯೆಂದು ಮಾತಿನ ಸಾಧನೆ ಅವರಲ್ಲಿ ನಡೆಯುತ್ತದೆ. ನೌಕೆಯನ್ನು ನಡೆಸುವ ಶಿಕ್ಷಣವನ್ನು ಯಾರಲ್ಲಿ ಪಡೆಯಲಾಯಿತೆಂಬುದನ್ನು ಹೇಳಲು ಅವರಲ್ಲೊಬ್ಬನೂ ಸಿದ್ಧನಿಲ್ಲ. ಚುಕ್ಕಾಣಿಯನ್ನು ಹಿಡಿಯುವ ಅಧಿಕಾರ ತಮತಮಗೆ ಸೇರಿದ್ದೆಂಬ ವಾದವನ್ನು ಒಬ್ಬರೂ ಬಿಟ್ಟುಗೊಡಲಾರರು. ನೌಕೆಯ ಅಧಿಕಾರವನ್ನು ನನಗೆ ತನಗೆ ಒಪ್ಪಿಸಬೇಕೆಂದು ಅವರು ಕಪ್ತಾನನ್ನು ಮುಗಿಬೀಳುತ್ತಾರೆ. ಆ ಕಪ್ತಾನನು ಕೆಲವರನ್ನು ಆರಿಸಿಕೊಂಡು ಇನ್ನುಳಿದವರನ್ನು ಬಿಟ್ಟರೆ, ಅವರು ಆ ಕೆಲವರನ್ನು ಕೊಲೆ ಮಾಡುತ್ತಾರೆ. ಇಲ್ಲವೆ ಸಮುದ್ರಕ್ಕೆ ಎಸೆಯುತ್ತಾರೆ. ಕಪ್ತಾನನಿಗೆ ಅಮಲು ಬರುವ ಮದ್ದು ಕೊಟ್ಟು ಹಡಗವನ್ನು ತಮ್ಮ ಸ್ವಾಧೀನಕ್ಕೆ ತೆಗೆದುಕೊಂಡು ಅಲ್ಲಿಯ ಸಂಗ್ರಹವನ್ನು ದೋಚುತ್ತಾರೆ. ಕುಡಿಯುತ್ತ ಕುಣಿಯುತ್ತ ಅವರ ಪ್ರಯಾಣ ಮುಂದೆ ಸಾಗುತ್ತದೆ. ಕಪ್ತಾನನ ಕೈಯಿಂದ ಹಡಗವನ್ನು ತಪ್ಪಿಸಿ ತಮ್ಮ ಸ್ವಾಧೀನಕ್ಕೆ ತಂದು ಕೊಡುವ ಕಾರ್ಯದಲ್ಲಿ ನೆರವಾದವರನ್ನು ಅವರು ನಾವಿಕ, ಸಮರ್ಥ ಸಮುದ್ರ–ಯಾನಿ, ನೇತಾ ಎಂಬ ಅಭಿದಾನಗಳಿಂದ ಸನ್ಮಾನಿಸುತ್ತಾರೆ. ಬೇರೆ ಧೋರಣೆ ವಹಿಸಿದವರನ್ನು ಕೆಲಸಕ್ಕೆ ಬಾರದವರೆಂದು ಹಿಯ್ಯಾಳಿಸುತ್ತಾರೆ.

ಕಪ್ತಾನನಾದವನು ನೌಕೆಯ ವಿಷಯದಲ್ಲಿ ಆಕಾಶ ಗಾಳಿ ನಕ್ಷತ್ರ ಋತುಗಳನ್ನು ನೋಡಿ ನಡೆಯಬೇಕಲ್ಲದೆ ಉಳಿದವರ ಬೇಕು–ಬೇಡಗಳನ್ನು ನೋಡಿ ಮಾತ್ರ ನಡೆಯಬಾರದು.

— ಪ್ಲೇಟೊ

# ವಿನಾಶ

ಆ್ಯಟಂ ಬಾಂಬಿನ ನಿರ್ಮಾಣವು ಮಾನವ ಇತಿಹಾಸದಲ್ಲಿಯೇ ಅತ್ಯಂತ ಘೋರತಮವಾದ ಬಿಕ್ಕಟ್ಟಿಗೆ ನಮ್ಮನ್ನು ತಂದು ನಿಲ್ಲಿಸಿದೆ. ದೊಡ್ಡ ಭೀತಿಗೆ ಕಾರಣವಾಗಿರುವಂತೆ ಅಣು ಶಕ್ತಿಯು ದೊಡ್ಡ ಆಸೆಗೂ ಕಾರಣವಾಗಿದೆ. ಮಾನವ ಜಗತ್ತಿನ ಸುಖ ಸಮೃದ್ಧಿಯನ್ನು ಆ ಶಕ್ತಿಯು ತನ್ನೊಳಗೆ ಗುಪ್ತವಾಗಿರಿಸಿಕೊಂಡಿದೆ. ಅದನ್ನು ನಮ್ಮ ಅನುಕೂಲಕ್ಕಾಗಿ ಮಾರ್ಪಡಿಸಿಕೊಳ್ಳದಿದ್ದರೆ ಅದು ನಮ್ಮೆಲ್ಲರನ್ನು ನುಂಗಿ ಹಾಕಬಹುದು, ದುರ್ದಮವಾದ ಘೋರ ಯುದ್ಧದ ನೋವಿನಲ್ಲಿ ನರಳುತ್ತಿರುವ ಜಗತ್ತು ಇಂದು ಅಣುಶಕ್ತಿಯ ಮಹಾ ಭೀತಿಯನ್ನು ಎದುರಿಸಬೇಕಾಗಿ ಬಂದಿದೆ.

ಎಲ್ಲ ರಾಷ್ಟ್ರಗಳಿಗೂ ಸಾಲುವಷ್ಟು ಅಣುಶಕ್ತಿ ಈ ಜಗತ್ತಿನಲ್ಲಿದ್ದರೂ ಯುದ್ಧದ ಕಾರ್ಮೋಡಗಳು ತೂಗುತ್ತಿರುವಾಗ ಅದರಿಂದ ಲಭಿಸಬಹುದಾದ ಪ್ರಯೋಜನವಾದರೂ ಏನು? ಪ್ರತಿಯೊಂದು ಪ್ರತಿದಾಳಿಯನ್ನು ಎದುರಿಸಲು ವಿಜ್ಞಾನವು ಸಂರಕ್ಷಣೆಯನ್ನು ಕಂಡು ಹಿಡಿದಿರಬಹುದು. ಆದರೆ ಅಣುಶಕ್ತಿಯನ್ನು ತಡೆಯತಕ್ಕ ಪ್ರತಿಶಕ್ತಿ ಮಾತ್ರ ಜಗತ್ತಿನಲ್ಲಿ ಇಲ್ಲ. ಸಾಂಘಿಕವಾದ ಮಾನವ ನಿರ್ಧಾರವೊಂದೇ ಅದನ್ನು ತಡೆಯಬಲ್ಲದು. ವಿಲಂಬ ಮಾಡಲು ಈಗ ಸಮಯವಿಲ್ಲ. ನಮ್ಮ ಜೀವಿತಗಳನ್ನೇ ಇಂದು ಪಣಕ್ಕೆ ಹಚ್ಚಿದಂತಾಗಿದೆ. ನಮ್ಮೆಲ್ಲರ ವೈರಿಯಂತೆ ತೋರುತ್ತಿರುವ ಈ ಹೊಸ ಶಕ್ತಿಯನ್ನು ನಾವು ಮನಸ್ಸು ಮಾಡಿದರೆ ನಮ್ಮ ಸ್ನೇಹಕ್ಕೆ ತಿರುಗಿಸಿಕೊಳ್ಳಬಹುದು. ಜಗತ್ತಿನ ಪ್ರತಿಯೊಬ್ಬ ಮನುಷ್ಯನಲ್ಲಿಯೂ ಇಂದು ವೈಯಕ್ತಿಕ ಜವಾಬ್ದಾರಿಯ ಪುನರುಜ್ಜೀವನ ನಡೆಯಬೇಕು. ಅದು ನಡೆಯದೆ ಜಾಗತಿಕ ಸರಕಾರಗಳು ಈ ಗಂಡಾಂತರವನ್ನು ತಪ್ಪಿಸಲು ಸಮರ್ಥವಾಗಲಾರವು. ಅಣುಶಕ್ತಿಯ ಅವತರಣದ ಪೂರ್ವದಲ್ಲಿ ಪ್ರಪಂಚದ ಸರಕಾರಗಳು ಜಾಗತಿಕ ಶಾಂತಿಯ ಸಮಸ್ಯೆಯನ್ನು ಪರಿಹರಿಸಲು ಅಸಮರ್ಥವಾಗಿದ್ದರೆ ಈಗ ಸಮರ್ಥವಾಗಲಾರವು. ಜಾಗತಿಕ ಶಾಂತಿಯು ಸರಕಾರೀ ಸಮಸ್ಯೆಯಲ್ಲ. ಅದು ಜನಸಾಮಾನ್ಯರೆಲ್ಲರ ವೈಯಕ್ತಿಕ ಪ್ರಶ್ನೆ.

— "ಒಂದು ಜಗತ್ತು ಅಥವಾ ಯಾವುದೂ ಇಲ್ಲ'' ಎಂಬ ಪುಸ್ತಕದಿಂದ

# ಜೀವನದ ಪುಸ್ತಕ

ಜೀವನದ ಗ್ರಂಥರಚನೆ ಮಾಡಬೇಕೆನ್ನುವವನು ತನ್ನ ಜೀವನದಲ್ಲಿ ಆಗಿಹೋದ ಸುಖದ ಗಳಿಗೆಗಳನ್ನು ಎಣಿಕೆಮಾಡುವ ಮೊದಲು ತಾನು ದಾಟಿಹೋದ ವಿಷನಿಮಿಷಗಳನ್ನು ನೆನೆದುಕೊಳ್ಳಲಿ. ಅನುಭವಿಸಿದ ಸುಖಕ್ಕಿಂತಲೂ ಅಳಿದುಹೋದ ಅನ್ಯಾಯದ ಗೆರೆಗಳು ಮೂಡಿಸುವ ನೆನಪೇ ಹೆಚ್ಚು ಮಧುರವಾದುದು.

ಈ ಜಗತ್ತಿನಲ್ಲಿ ಹೆಚ್ಚಿನ ಆನಂದವನ್ನು ಪಡೆದವನು ಅಥವಾ ಸಂತೋಷವನ್ನು ಅನುಭೋಗಿಸಿದವನು ಸುಖಿಯಲ್ಲವೆಂದು ನನ್ನ ಭಾವನೆ. ದೈಹಿಕ ಇಲ್ಲವೆ ಮಾನಸಿಕವಾದ ಯಾವ ಬಗೆಯ ನೋವನ್ನೂ ಅನುಭೋಗಿಸದೇ ಜೀವನದ ಕೊನೆಯಾದರೆ ಅದರಲ್ಲಿ ಸುಖವೇನು ಬಂದಿತು ?

ಜೀವನದಲ್ಲಿ ಗೋಚರವಾಗುವ ಹಲಕೆಲವು ಸಂತೋಷದ ಪ್ರಸಂಗಗಳಿಂದ ಜೀವನದ ಸೌಖ್ಯವನ್ನು ಅಳೆಯಬಾರದು. ಅದು ಜೀವನವನ್ನು ಅಳೆಯುವ ಸರಿಯಾದ ಕ್ರಮವಲ್ಲ. ಸಂತೋಷದ ಪಾತ್ರ ಯಾವಾಗಲೂ ನಶ್ವರವಾದುದು. ಅದಕ್ಕೆ ಶಾಶ್ವತದ ಮುದ್ರೆ ಇಲ್ಲ. ಸಂತೋಷದ ಪ್ರಸಂಗಗಳಿಂದ ಸೌಖ್ಯ ಉಂಟಾಗುವುದೆಂಬುದು ಶುದ್ಧ ಭ್ರಮೆ. ಜೀವನದಲ್ಲಿ ನೋವು ನಿರಂತರ. ಅದು ಅಳಿದಾಗಲೇ ಶಾಶ್ವತ ಸುಖ. ಹಾಗೂ ಶಾಶ್ವತ ಶಾಂತಿ. ನೋವಿನ ವಿನಾಶವೇ ಸುಖದ ಉಗಮ.

— ಷೋಪನ್‌ಹೌರ್

# ಜೀವಿತದ ಬೆಲೆಗಳು

ಇಂದಿನ ಜಾಗತಿಕ ಗಂಡಾಂತರದಲ್ಲಿ ಜೀವಿತದ ಬೆಲೆಗಳು ಹೆಚ್ಚು ಕಡಿಮೆಯಾಗಿ ಹೋಗಿವೆ.

ಸ್ನೇಹಿತರು ಅದಲು ಬದಲಾಗಿದ್ದಾರೆ. ಒಡನಾಡಿಗರು ವೈರಿಗಳಾಗಿ ಪರಿವರ್ತನೆ ಹೊಂದಿದ್ದಾರೆ. ವಿಚಾರದ ದುರುಪಯೋಗ ನಡೆದಿದೆ. ಇದೆಲ್ಲದರ ಹಿಂದೆ ಅರಾಜಕತೆ ಹಾಗೂ ಶೂನ್ಯವಾದಗಳ ಛಾಯೆ ಕಾಣತೊಡಗಿದೆ.

ಹೊಸ ಹೊಸ ಪದಪ್ರಯೋಗಗಳಿಗೇನೂ ಕೊರತೆಯಿಲ್ಲ. ಪಾಶ್ಚಾತ್ಯ ನಾಗರಿಕತೆ,ಪ್ರಜಾಪ್ರಭುತ್ವ, ಮಾನವ ಸ್ವಾತಂತ್ರ್ಯ, ಸಾಮಾಜಿಕನ್ಯಾಯ, ಹೊಸ ವ್ಯವಸ್ಥೆ, ಸಾಮ್ರಾಜ್ಯವಾದ, ಸಮಾಜವಾದ, ಬಂಡವಾಳಗಾರಿಕೆ ಹಾಗೂ ಇನ್ನೂ ಅನೇಕ ಪದಗಳನ್ನು ಸ್ವೇಚ್ಛೆಯಿಂದ ಉಪಯೋಗಿಸಲಾ ಗುತ್ತಿದೆ. ನಮ್ಮ ಕಾಲದಲ್ಲಿ ಶಬ್ದದ ಬೆಲೆ ಕಡಿಮೆಯಾಗುತ್ತ ನಡೆದಿದೆ ಯೆಂಬುದಕ್ಕೆ ದಿನ ದಿನವೂ ಕೋಟ್ಯಾಂತರ ಶಬ್ದಗಳನ್ನು ಆಕಾಶವಾಣಿ, ಚಲಚ್ಚಿತ್ರ ಹಾಗೂ ಸಾರ್ವಜನಿಕ ಸಭೆಗಳ ಮೂಲಕ ಹೊರಗೆ ಹಾಕುತ್ತಿ ರುವುದೇ ಸಾಕ್ಷಿಯಾಗಿದೆ.

ಮಾನವತೆಯ ಇತಿಹಾಸವು ಭಿನ್ನ ಭಿನ್ನ ಶಕ್ತಿಗಳ ಕ್ರೀಡಾರಂಗ ವಾಗಿದೆ. ವಿಚಾರ, ಉದ್ದೇಶ, ನಂಬಿಗೆ, ವ್ಯಕ್ತಿ ಹಿತಸಂಬಂಧ, ಅಧಿಕಾರದ ರಾಜಕಾರಣ ಮುಂತಾದವುಗಳೆಲ್ಲವೂ ಜೀವನದಲ್ಲಿ ಹಾಸುಹೊಕ್ಕಾಗಿ ಸೇರಿ ಕೊಂಡು ಕಾರ್ಯಾಚರಣೆ ನಡೆಸಿವೆ.

ಈಗ ಜೀವಿತದ ಮೂಲಭೂತ "ಬೆಲೆಗಳನ್ನು" ಮಾತ್ರ ಆಹ್ವಾನಿಸ ಲಾಗಿಲ್ಲ. ಈ ಆಹ್ವಾನಕ್ಕಿಂತಲೂ ಹೆಚ್ಚಿನ ವೈರಿಯನ್ನು ಮಾನವತೆಯು ಇಂದು ಎದುರಿಸಬೇಕಾಗಿದೆ. ಶೂನ್ಯವಾದವೇ ಆ ವೈರಿ. ವ್ಯಕ್ತಿ ಹಾಗೂ ಸಮಾಜ ಜೀವನದಲ್ಲಿನ ಹೋರಾಟವನ್ನಲ್ಲದೆ, ಅಧಿಕಾರದ ದುರಾಗ್ರಹವ ನ್ನಲ್ಲದೆ ಬೇರೆ ಯಾವುದನ್ನೂ "ಶೂನ್ಯವಾದ"ವು ಕಾಣುವುದಿಲ್ಲ. ನಾಗ ರಿಕತೆಯು ಪರೀಕ್ಷೆಗೊಳಗಾದ ಕಾಲದಲ್ಲೆಲ್ಲ ಶೂನ್ಯವಾದವು ತಲೆಯೆತ್ತಿ

ಜಗತ್ತನ್ನು ಅಂಜಿಸಿದೆ. ಕೆಲಜನ ಪ್ರಬಲ ವ್ಯಕ್ತಿಗಳ ರಾಕ್ಷಸೀ ಮಹತ್ವಾಕಾಂಕ್ಷೆಗೆ ಜಗತ್ತು ಆ ಕಾರಣದಿಂದಲೇ ಆಗಾಗ್ಗೆ ಅನ್ನವಾದದ್ದುಂಟು.

ನಾಗರಿಕತೆಯ ಮೂಲಭೂತ ಬೆಲೆಗಳನ್ನು ಪುನರ್ವಿಮರ್ಶಿಸದೆ ನಾವು ಶೂನ್ಯವಾದವನ್ನು ಸಮರ್ಥವಾಗಿ ಎದುರಿಸಲಾರೆವು. ವಿಮರ್ಶಿಸುವುದೊಂದೇ ಅಲ್ಲದೆ ಆ ವಿಮರ್ಶೆಗೆ ತಕ್ಕಂತೆ ಆಚರಿಸುವ ಎದೆಗಾರಿಕೆಯೂ ನಮ್ಮಲ್ಲಿ ಬರಬೇಕು. ಕವಿದು ಬರುತ್ತಿರುವ ಅರಾಜಕತೆಯನ್ನು ನಾವು ಅದೊಂದೇ ಹಾದಿಯಿಂದ ಮಾತ್ರ ತಪ್ಪಿಸಬಲ್ಲೆವು. ಇಲ್ಲದಿದ್ದರೆ ಪೀಳಿಗೆ ಪೀಳಿಗೆಗಳ ವರೆಗೂ ಅದರ ತಿರುಗಣಿ ಮಡುವಿನಲ್ಲಿ ಸಿಕ್ಕು ಜಗತ್ತು ನವೆಯಬೇಕಾಗುತ್ತದೆ.

— ಡಾ|| ಸರ್ವಪೆಳ್ಳಿ ರಾಧಾಕೃಷ್ಣನ್

---

# ಜೀವನದ ಗುರಿ

ಜೀವನವನ್ನು ಇದ್ದಕ್ಕಿದ್ದಂತೆ ಒಪ್ಪಬೇಕೆನ್ನುವುದು ಮಾನವ ಸ್ವಭಾವಕ್ಕೆ ಒಗ್ಗದ ವಿಷಯ. ಮನುಷ್ಯನಿಗೆ ಅದರಿಂದ ತೃಪ್ತಿಯಿಲ್ಲ. ಆತನ ಎದೆಯಲ್ಲಿ ಹುದುಗಿಕೊಂಡಿರುವ ಒಂದು ಶಕ್ತಿಯು ಆತನನ್ನು ಮುಂದೆ ಸಾಗುವಂತೆ ನಿರಂತರವೂ ಪ್ರೇರೇಪಿಸುತ್ತಿರುತ್ತದೆ.

ಇರುವ ರೀತಿಯಲ್ಲಿಯೇ ಜಗತ್ತನ್ನು ಕಾಯ್ದಿರಿಸುವುದು ಜೀವನದ ಅಂತಿಮ ಗುರಿಯಲ್ಲ. ಜಗತ್ತು ಮೇಲಕ್ಕೆ ಬರಬೇಕಾಗಿದೆ. ಯೋಗ್ಯರೀತಿಯಲ್ಲಿ ಬದುಕಿ ವ್ಯಕ್ತಿತ್ವದ ಪರಿಪೂರ್ಣತೆಯನ್ನು ಸಾಧಿಸಬೇಕೆಂದು ಪ್ರತಿಯೊಬ್ಬ ಮನುಷ್ಯನೂ ಬಯಸುತ್ತಾನೆ. ಜೀವನವನ್ನು ಇರುವಂತೆ ಒಪ್ಪಿ ಹೆಚ್ಚಿನ ಸಾಹಸಕ್ಕೆ ತೊಡಗುವುದೇ "ನೈತಿಕ ಪ್ರಗತಿ" ಯಾಗಿದೆ.

ಹಿಂದಿನ ಜೀವನದ ಬಗೆಗಳನ್ನು ಈಗ ಪುನರುಜ್ಜೀವಿಸುತ್ತ ಕೂಡಬೇಕಾದುದಿಲ್ಲ. ಹಾಗೆ ಶಕ್ಯವಾಗಬಹುದಾದರೂ ಅದು ಉಚಿತವೆನಿಸಲಾರದು. ರಜಪೂತ ಯೋಧನ ಇಲ್ಲವೆ ಮಧ್ಯಯುಗದ ಸರದಾರನ ರೀತಿ ನೀತಿಗಳು ಆಧುನಿಕ ಕಾಲಕ್ಕೆ ಹೊಂದಿಕೆಯಾಗಲಾರವು. ಬದಲಾಗದಂಥ ಪರಿಸ್ಥಿತಿ ಸುತ್ತುಮುತ್ತಲೂ ಇದೆಯೆಂದರೂ ಕೂಡ ನಮ್ಮ ಸಮಸ್ಯೆ ಅಲ್ಲಿಗೇ ಮುಗಿಯಲಿಲ್ಲ. ಯಾಕೆಂದರೆ ನಮ್ಮ ಆದರ್ಶಗಳು ಸದಾವಕಾಲವೂ ಬದಲಾವಣೆ ಹೊಂದುತ್ತಲೇ ಇರುತ್ತವೆ. ಆದುದರಿಂದ ಜೀವನಕ್ಕೆ ನಾವು ಹೊಂದಿಕೊಳ್ಳುವುದಲ್ಲದೆ ನಮ್ಮ ಆದರ್ಶಗಳಿಗೆ ತಕ್ಕಂತೆ ಜೀವನವನ್ನು ಮಾರ್ಪಡಿಸುವುದೇ ನೈತಿಕ ಜೀವನದ ತಿರುಳಾಗಿದೆ.

ಇರುವ ರೀತಿಯಲ್ಲಿಯೇ ಜೀವನವನ್ನು ಒಪ್ಪುವುದು ಒಂದು ದೃಷ್ಟಿಯಿಂದ ಪರಿಪೂರ್ಣವಾಗಿ ತೋರಬಹುದು. ಆದರೆ ಅದು ಮಾನವ ಪರಿಪೂರ್ಣತೆಯಲ್ಲ. ಜೀವನಕ್ಕೆ ಹೊಂದಿಕೊಳ್ಳುವುದರಲ್ಲಿಯೂ ಒಂದು ಬಗೆಯ ಸೊಗಸು ಇದೆ. ಆದರೆ ಆ ಹೊಂದಿಕೆಯು ಕ್ಷಣ ಕ್ಷಣಕ್ಕೆ ಬದಲಾಗುತ್ತಿರುವ ಈ ವೈವಿಧ್ಯಮಯ ಜಗತ್ತಿನಲ್ಲಿ ಬಹುಕಾಲ ಬಾಳಲಾರದು.

ಜೀವನದ ಹಾದಿಯಲ್ಲಿ ವಿಶ್ರಾಂತಿ ಸ್ಥಳವೊಂದೂ ಇಲ್ಲ. ಒಂದೊಂದು ಸಾಧನೆಯೂ ಹೊಸ ಸಾಹಸಕ್ಕೆ ಪ್ರಚೋದನೆ ಕೊಡುವುದೇ ಆಗಿದೆ. ನೆಲಕ್ಕೆ ಹೊಂದಿಕೊಂಡ ಕಲ್ಲು ಮಣ್ಣಿನಂತೆ ಜೀವನಕ್ಕೆ ಹೊಂದಿಕೊಳ್ಳುವುದಲ್ಲ. ಏರಬೇಕಾಗಿರುವ ಒಂದು ಎತ್ತರಕ್ಕೆ ಜಗತ್ತನ್ನು ಎತ್ತರಿಸುವವರೆಗೆ ಸಾಹಸಪಡುವುದೇ ಜೀವನದ ಚರಮ ಗುರಿ.

— ಡಾ|| ಸರ್ವಪೆಳ್ಳಿ ರಾಧಾಕೃಷ್ಣನ್

---

# ಅಳಿವು-ಉಳಿವು

ಕಿರಾತ ಪ್ರವೃತ್ತಿ ಇಂದು ಎಲ್ಲೆಲ್ಲಿಯೂ ಕಾಣಿಸಿಕೊಂಡಿದೆ. ನಮ್ಮನ್ನು ನುಂಗುವಂತೆ ಅನಾಗರಿಕತೆ ಧಾವಿಸಿ ಬರತೊಡಗಿದೆ. ಹಿಂದಿನ ಅನಾಗರಿಕತೆಗಿಂತ ಅದು ಹೆಚ್ಚು ಭೀಕರವಾದುದು. ಅದರ ಭಯ, ವೇಗ ಹಾಗೂ ವಿನಾಶದ ಸ್ವರೂಪವನ್ನು ಗಮನಿಸಿದರೆ ಅದಕ್ಕೆ ಪ್ರತಿಹೋಲಿಕೆ ದೊರೆಯಲಾರದು.

ಜೀವನ ಪ್ರಮಾಣವು ಕಡಿಮೆಯಾಗುತ್ತ ನಡೆಯುವುದು. ಆರೋಗ್ಯವು ಕ್ಷೀಣಿಸುವುದು. ಸಾಂಕ್ರಾಮಿಕ ಜಾಡ್ಯಗಳು ಇಡೀ ಜಗತ್ತನ್ನೇ ಪ್ರಯೋಗ ಭೂಮಿಯನ್ನಾಗಿ ಮಾಡಿಕೊಳ್ಳುವುವು. ಗವಿಯಲ್ಲಿ ಆರಂಭವಾದ ಮನುಷ್ಯ ಜೀವನವು ಕೊನೆಗೆ ರೋಗದ ಕೊಳಚೆಯಲ್ಲಿ ಅವಸಾನಗೊಳ್ಳುವುದು. ಇದಕ್ಕಿಂತ ಬೇರೆ ಏನಾಗಬೇಕಾದೀತು ? ಮನುಷ್ಯನಿಗೆ ಇದಲ್ಲದೆ ಬೇರೆ ಭವಿಷತ್ತು ಯಾವುದಿದೆ ? ಎದುರಿಗಿರುವುದನ್ನು ಕಾಣದಷ್ಟು ಮನುಷ್ಯ ಕುರುಡನಾದನೇ ? ಜಗತ್ತಿನಲ್ಲಿ ಇನ್ನೂ ಕೆಲಮಟ್ಟಿಗೆ ಬೆಳಕು ಇರುವಾಗ, ಕೆಲಮಟ್ಟಿಗೆ ವಿಚಾರ ಹಾಗೂ ಆಚಾರ ಸ್ವಾತಂತ್ರ್ಯ ಇರುವಾಗ, ಆತನು ಪರಿಸ್ಥಿತಿಯನ್ನು ಹಿಡಿತಕ್ಕೆ ತಂದುಕೊಳ್ಳಲು ಪ್ರಯತ್ನಿಸಬಾರದೇಕೆ ? ಎಲ್ಲ ಶಕ್ತಿಗಳೂ ತನ್ನ ವಿರುದ್ಧ ನಿಂತಿರುವಾಗ ಪ್ರಯತ್ನಿಸಿ ಫಲವೇನು ಎಂದು ಆತನು ಸಂದೇಹಗೊಂಡಿರಲೂ ಕಾರಣಗಳಿವೆ.

ಮನುಷ್ಯನ ಬಗ್ಗೆ ಪ್ರಕೃತಿಗೆ ಪಕ್ಷಪಾತತನವಿಲ್ಲ. ಪ್ರಕೃತಿಯ ದೃಷ್ಟಿಯಲ್ಲಿ ಮನುಷ್ಯನೂ ಮರವೂ ಎರಡೂ ಒಂದೇ ! ನನ್ನ ಆಶಾವಾದವು ಪ್ರಬಲವಾದುದಾದರೂ ಮನುಷ್ಯನ ಬಗ್ಗೆ ಜಗತ್ತಿಗೆ ಮಾತ್ರ ಈಗ ಜಿಗುಪ್ಸೆಯುಂಟಾಗಿದೆಯೆಂದು ನಾನು ಹೇಳಬಲ್ಲೆ. ದೈವದ ಪ್ರವಾಹದಲ್ಲಿ ತೇಲುತ್ತ ಮನುಷ್ಯನು ಅವನತಿ, ದುಃಖ, ಮೃತ್ಯುಗಳೆಡೆಗೆ ಸಾಗಿದ್ದಾನೆ.

ಹೊಂದಿಕೊಳ್ಳಬೇಕು, ಇಲ್ಲವೆ ಹಾಳಾಗಬೇಕು. ಮನುಷ್ಯನಿಗೆ ಇಂದು ಬೇರೆ ದಾರಿ ಇಲ್ಲ. ಕಾಲಮಾನದ ಅಗತ್ಯಗಳನ್ನು ಅರಿತುಕೊಂಡು ಮನುಷ್ಯನು ಸುಖಮಯವಾದ ಹೊಸ ಜಗತ್ತಿನ ನಿರ್ಮಾಣಕ್ಕೆ ಹೆಣಗ

ಬೇಕು. ತಪ್ಪಿದರೆ ವಿನಾಶ ಕಟ್ಟಿಟ್ಟಮಾತು. ಇದನ್ನು ಗಮನಿಸಿದರೆ ಮಾನವ ಜೀವನ ನೂತನವಾಗಿ ಆರಂಭವಾಗಿದೆಯೆನ್ನಬೇಕು. ಅಥವಾ ಮುಗಿತಕ್ಕೆ ಬಂದಿದೆಯೆಂದು ಹೇಳಬೇಕು. ಇದು ತರ್ಕವೂ ಅಲ್ಲ; ಮಾಯಾ ಮಂತ್ರವೂ ಅಲ್ಲ. ವಿವೇಕದ ಈ ಪ್ರಶ್ನೆ ಇಂದು ಮನುಷ್ಯನನ್ನು ಎದುರಿಸಿದೆ. ಅದನ್ನು ಬಿಡಿಸಿ ಅವನು ಉಳಿಯಬೇಕು, ಇಲ್ಲವೆ ಅಳಿಯಬೇಕು.

— ಎಚ್. ಜಿ. ವೆಲ್ಸ್

---

# ಸರ್ವತ್ಯಾಗವೇ ಸುಖ

ರೋಮ್ ನಗರದಲ್ಲಿದ್ದ ಶ್ರೀಮಂತ ಗೃಹಸ್ಥನೊಬ್ಬನ ಕತೆಯನ್ನು ನೀವೆಲ್ಲರೂ ಕೇಳಿದ್ದೀರಿ. ತನ್ನ ವಿಪುಲ ಆಸ್ತಿಯಲ್ಲಿ ಕೇವಲ ಹತ್ತು ಲಕ್ಷ ಪೌಂಡಿನಷ್ಟು ಮಾತ್ರ ಉಳಿದಿದೆಯೆಂದು ಆತನಿಗೆ ಒಂದು ದಿನ ತಿಳಿಯ ಬಂದಿತು. " ನಾಳೆ ನನ್ನ ಗತಿಯೇನು, " ಎಂದು ಅವನು ತನ್ನ ಮನಸ್ಸಿನಲ್ಲಿ ಮಿಡುಕಿ ಆಗಿಂದಾಗ ಆತ್ಮಹತ್ಯಮಾಡಿಕೊಂಡನು. ಹತ್ತು ಲಕ್ಷ ಪೌಂಡು ಹಣ ಆತನಿಗೆ ದಾರಿದ್ರ್ಯದ ಸೂಚನೆಯಾಗಿ ತೋರಿತು. ಹಾಗಾದರೆ ಈ ಜಗತ್ತಿನಲ್ಲಿ ಯಾವುದು ಸುಖ, ಯಾವುದು ದುಃಖ?

ಸುಖದ ಬಗ್ಗೆ ಪ್ರತಿಯೊಬ್ಬನ ಕಲ್ಪನೆಯೂ ಭಿನ್ನವಾಗಿದೆ. ದಿನವೂ ಒಂದು ಹಿಡಿ ಅಫೀಮನ್ನು ನುಂಗಲಾರದೆ ತನಗೆ ಸುಖವಿಲ್ಲವೆನ್ನುವ ಮನು ಷ್ಯನನ್ನು ನಾನು ಕಂಡಿದ್ದೇನೆ. ನಾವು ಅನುಭವಿಸುವ ಕೊರತೆಯೇ ನಮ್ಮ ಮನಸ್ಸಿನಲ್ಲಿ ಸ್ವರ್ಗದ ಕಲ್ಪನೆಯನ್ನು ಕೊರೆಯುತ್ತಿದೆ. ಬದಲಾಗುವ ನಮ್ಮ ಆವಶ್ಯಕತೆಗಳಂತೆ ಸ್ವರ್ಗದ ನಮ್ಮ ಕಲ್ಪನೆಯೂ ಬದಲಾವಣೆಗೊಳ್ಳುತ್ತ ನಡೆಯುವುದು. ಕೆಲವರು ಬಯಸುವಂಥ ಇಂದ್ರಿಯ ಸುಖಾನುಭವದ ಸ್ವರ್ಗವೇ ನಮಗೆ ಲಭಿಸಿದರೆ ನಮ್ಮ ಕೊನೆಗಾಲ ಸಮೀಪಿಸಿತೆಂದೇ ಹೇಳ ಬೇಕು. ಸ್ವಲ್ಪ ನಗೆ, ನಾಲ್ಕುಹನಿ ಕಣ್ಣೀರು, ಆಮೇಲೆ ಬೀದಿಯ ನಾಯಿ ಯಂತೆ ಬಿದ್ದುಹೋಗುವುದು—ಮನುಷ್ಯ ಬಯಸುವ ಸುಖ ಇದೇ ಏನು?

ಸುಖವನ್ನು ತ್ಯಜಿಸಬೇಕೆಂದು ಯಾವ ಶಾಸ್ತ್ರವೂ ಹೇಳಿಲ್ಲ. ಯಾವುದು ನಿಜವಾಗಿಯೂ ಸುಖ ಎಂಬುದನ್ನು ತಿಳಿದುಕೊಳ್ಳುವುದೇ ಮುಖ್ಯವಾದುದು. ಈ ಜಗತ್ತು ಒಂದು ಛಾಯೆ ಮಾತ್ರ. ಸತ್ಯದ ಮೂಲವನ್ನು ನಾವು ಶೋಧಿ ಸಬೇಕು. ಸರ್ವ ಪರಿತ್ಯಾಗ ಮಾಡಿದಾಗಲೇ ನಾವು ಆ ತಿರುಳನ್ನು ಕಂಡು ಕೊಳ್ಳಬಲ್ಲೆವು. ತ್ಯಾಗವೇ ನಮ್ಮ ಜೀವನದ ತಳಹದಿಯಾಗಬೇಕು. " ನನ್ನದು " ಎನ್ನುವ ವಿಚಾರ ನಮ್ಮನ್ನು ಬಿಟ್ಟು ತೊಲಗಿದಾಗಲೇ ನಾವು ನಿಜವಾದ ಸುಖವನ್ನು ಅನುಭವಿಸಬಲ್ಲೆವು.

— ಸ್ವಾಮಿ ವಿವೇಕಾನಂದ

# ಅಂತರಂಗ ಶಾಂತಿ

ಜೀವನದಲ್ಲಿ ತನ್ನ ಪಾಲಿಗೆ ಬಂದುದೆಲ್ಲವನ್ನೂ ಜಾಣನಾದ ಮನುಷ್ಯನು ಇನ್ನೊಂದನ್ನೆಣಿಸದೆ ಎದೆಗಾರಿಕೆಯಿಂದ ಸ್ವೀಕರಿಸುತ್ತಾನೆ. ಉಪಲಬ್ಧವಿರುವ ವಸ್ತುಗಳಿಂದಲೇ ಆತನ ಕೆಲಸದ ಸೃಷ್ಟಿ ನಡೆಯುತ್ತದೆ. ಇರುವ ಸನ್ನಿವೇಶ ಭಿನ್ನವಾಗಿರಬೇಕೆಂದಾಗಲಿ ಇಲ್ಲವೆ ಪರಿಸ್ಥಿತಿಗೆ ತಕ್ಕಂತೆ ತನ್ನ ಶಕ್ತಿ ಸಾಲದೆಂದಾಗಲಿ ಅವನೆಂದೂ ಯೋಚಿಸುವುದಿಲ್ಲ. ಹಾಗೆ ಮಾಡುವುದರಿಂದ ಶಕ್ತಿ ಉತ್ಸಾಹಗಳ ಅಪವ್ಯಯವಾಗುವುದಲ್ಲದೆ ಒದಗಿ ಬಂದ ಅವಕಾಶಗಳೂ ಜಾರಿಕೊಂಡು ಬಿಡುತ್ತವೆ.

ಹೆಚ್ಚಿನ ಅವಕಾಶ ಒದಗಬೇಕೆಂದು ಕೈ–ಕಟ್ಟಿ ಕುಳಿತುಕೊಳ್ಳುವುದ: ಬುದ್ಧಿವಂತಿಕೆಯ ಲಕ್ಷಣವಲ್ಲ. ಸಣ್ಣದಿರಲಿ ದೊಡ್ಡದಿರಲಿ, ಇರುವ ಅವಕಾಶವನ್ನು ಅನುಕೂಲಕ್ಕೆ ತಿರುಗಿಸಿಕೊಳ್ಳಬೇಕು. ಪ್ರಸಂಗ ಬಂದಾಗ ಚಾತುರ್ಯ ತೋರಿಸುವುದಕ್ಕಿಂತಲೂ ಅದನ್ನು ಸಂತತವೂ ಜಾಗೃತಿಯಲ್ಲಿರಿಸಿಕೊಳ್ಳುವುದೇ ವ್ಯಕ್ತಿತ್ವದ ಮೂಲಮಂತ್ರವಾಗಿದೆ.

ಬಂದುದೆಲ್ಲವನ್ನೂ ಗೊಣಗುಟ್ಟದೆ ಸ್ವೀಕರಿಸುವ ಮನೋಧರ್ಮ ಹಾಗೂ ನಿರ್ಧಾರದ ಮನಸ್ಸಿನಿಂದ ಮನುಷ್ಯನ ನಡತೆ ಉತ್ತಮವೆನಿಸುತ್ತದೆ. "ಉತ್ತಮ ನಡತೆ" ಯೇ ಜೀವನದ ನಿಜವಾದ ಸಂಪತ್ತು. ಅದನ್ನು ಪಡೆದವನಿಗೆ ಅಂತರಂಗ ಶಾಂತಿ ಯಥೇಷ್ಟವಾಗಿರುತ್ತದೆ. ಅದರ ಎದುರಿನಲ್ಲಿ ಹೊರಗಿನ ವಿಜಯಗಳು ಕ್ಷುದ್ರವೆನಿಸುತ್ತವೆ.

— ಅರ್ನೆಸ್ಟ್‌ವುಡ್

# ಸ್ತ್ರೀ

ವಿಜ್ಞಾನದ ಪ್ರಭಾವದಿಂದ ನಾಗರಿಕತೆಯು ಇತ್ತೀಚಿತ್ತಲಾಗಿ ಹೆಚ್ಚು ಹೆಚ್ಚು ಪುರುಷಮಯವಾಗುತ್ತ ನಡೆದು ವ್ಯಕ್ತಿಯ ನೈಜ ಸ್ವರೂಪವು ಅಳಿದು ಹೋಗತೊಡಗಿದೆ. ವೈಯಕ್ತಿಕ ಸಂಬಂಧಗಳ ಕ್ಷೇತ್ರದಲ್ಲಿ ಸಂಘಟನೆಯು ಅತಿಕ್ರಮಣ ಹೂಡಿ ಭಾವನೆಯು ಶಾಸನಕ್ಕೆ ಶರಣಾಗಲಾರಂಭಿಸಿದೆ. ಪುರುಷ ಆದರ್ಶಗಳಿಗೆ ಮರುಳಾದ ಸಮಾಜವು ಹಿಂದಕ್ಕೆ ಮಕ್ಕಳನ್ನು ಕೊಂದು ಸ್ತ್ರೀಯರ ಸಂಖ್ಯೆಯನ್ನು ಕಡಿಮೆ ಮಾಡಿತು. ಈ ಆಧುನಿಕ ನಾಗರಿಕತೆಯ ಲ್ಲಿಯೂ ಕೂಡ ಅದೇ ಕಾರ್ಯವು ಬೇರೊಂದು ಸ್ವರೂಪದಲ್ಲಿ ನಡೆದಿರುವುದನ್ನು ನಾವು ಕಾಣುತ್ತಿದ್ದೇವೆ.

ಅಧಿಕಾರ ಹಾಗೂ ಸಂಪತ್ತುಗಳ ಅತಿಯಾಸೆಗೆ ಬಲಿಬಿದ್ದ ಆಧುನಿಕ ಜಗತ್ತು ಸ್ತ್ರೀ–ಜಗತ್ತನ್ನೇ ಅಪಹರಿಸಿದೆ. ಮನೆಯೆನ್ನುವುದು ದಿನ ದಿನಕ್ಕೆ ಕಚೇರಿಯಾಗಿ ಪರಿವರ್ತನೆಗೊಳ್ಳತೊಡಗಿರುವುದರಿಂದ ಸ್ತ್ರೀ–ಚಟುವಟಿಕೆಗೆ ಮನೆಯಲ್ಲಿ ಅವಕಾಶವೇ ಇಲ್ಲದಂತಾಗಿದೆ. ಸ್ತ್ರೀ ಸಮಾಜಕ್ಕೆ ಇದು ಅನ್ಯಾಯ ಮಾತ್ರವಲ್ಲ, ಅಪಮಾನವೇ ಸರಿ.

ಮನುಷ್ಯನ ಪುರುಷ ಬಲಕ್ಕೆ ಬಲಿಯಾಗಿ ಸ್ತ್ರೀಯು ಇನ್ನೂ ಬಹಳ ಕಾಲ ಅಲಂಕಾರ ಪ್ರಪಂಚದಲ್ಲಿ ಉಳಿಯಲಾರಳು. ನಾಗರಿಕತೆಗೆ ಪುರುಷನಿಗಿಂತಲೂ ಸ್ತ್ರೀಯ ಆವಶ್ಯಕತೆ ಹೆಚ್ಚಾಗಿದೆ. "ಮಾನವ" ಜಗತ್ತು ಸ್ತ್ರೀಯ ಸಹಕಾರವಿಲ್ಲದೆ, ಪರಿಶ್ರಮವಿಲ್ಲದೆ ರೂಪಗೊಳ್ಳಲಾರದು. ನೋವು ತಿಂದ ನಾಗರಿಕತೆಗೆ ಈಗ ಆರೈಕೆ ಸಿಗಬೇಕಾಗಿದೆ. ಸ್ತ್ರೀಯು ಮುಂದೆ ಬಂದು ಜಗತ್ತನ್ನು ಎತ್ತಿಕೊಳ್ಳಬೇಕು. ಜಗತ್ತಿನ ಅವಮಾನಿತ ವ್ಯಕ್ತಿಗಳು ಸ್ತ್ರೀಯ ಕರುಣೆಗಾಗಿ ಇಂದು ಕೈ ಚಾಚಿದ್ದಾರೆ.

— ರವೀಂದ್ರನಾಥ ಠಾಕೂರ.

# ಭಾರತ ಸಂಸ್ಕೃತಿ

ಪುರಾತನ ಕಾಲದಿಂದಲೂ ಭಾರತವು ಪರಸ್ಪರ ವಿರೋಧ ಸಂಸ್ಕೃತಿ ಹಾಗೂ ನಾಗರಿಕತೆಗಳ ಸಂಗಮ ಸ್ಥಳವಾಗಿದೆ. ಆ ಎಲ್ಲ ಭಿನ್ನ ಭಿನ್ನ ಪಂಗಡಗಳಲ್ಲಿ ಭಾರತವು ಸಂಯೋಜನೆಯನ್ನು ಸ್ಥಾಪಿಸುವ ಪ್ರಯತ್ನವನ್ನು ಆ ಕಾಲದಿಂದಲೂ ಮಾಡುತ್ತ ಬಂದಿದೆ.

ಅವ್ಯಾಹತವಾದ ಚರಿತ್ರೆಯನ್ನು ಪಡೆದಿರುವ ಭಾರತದ ನಾಗರಿಕತೆಯೇ ಜಗತ್ತಿನಲ್ಲಿ ಹಿರಿಯದೆಂದು ತೋರುತ್ತದೆ. ಭಾರತವು ಕೇವಲ ಬದುಕಿ ಉಳಿಯದೆ ಸಂತತವಾದ ಸಂಸ್ಕೃತಿಯನ್ನು ಪೋಷಣೆ ಮಾಡಿಕೊಂಡು ಬಂದಿದೆ. ನಾನಾಬಗೆಯ ಜನರು ಹಿಂದುಸ್ತಾನದ ನೆಲದಲ್ಲಿ ಕಾದಿದ್ದಾರೆ, ಬದುಕಿದ್ದಾರೆ, ಬೆಳೆದಿದ್ದಾರೆ. ಅವರೆಲ್ಲರ ಬದುಕನ್ನೂ ಭಾರತವು ತನ್ನಲ್ಲಿ ಅರಗಿಸಿ ರಕ್ತಗತ ಮಾಡಿಕೊಂಡಿದೆ.

ದ್ವಂದ್ವ ಸಂಸ್ಕೃತಿಗಳು ತಮ್ಮ ಸಾರ್ವಭೌಮತ್ವವನ್ನು ಇಲ್ಲಿ ಸ್ಥಾಪಿಸಬೇಕೆಂದು ಪ್ರಯತ್ನಪಟ್ಟರೂ ಭಾರತವು ಅವೆಲ್ಲವನ್ನೂ ಉಜ್ಜಿ ತನ್ನ ಪ್ರತಿರೂಪವೆನ್ನುವಂತೆ ಅವುಗಳನ್ನು ಮಾರ್ಪಡಿಸಿಕೊಂಡಿದೆ. ಇಲ್ಲಿ ನೆಲೆಯೂರಬೇಕೆನ್ನುವ ವಿದೇಶೀ ಸತ್ಯಗಳು ಒಂದು ಹೊಸ ಸಮನ್ವಯದಲ್ಲಿ ಪರ್ಯವಸಾನಗೊಂಡಿವೆ.

ಶತಮಾನ ಶತಮಾನಗಳ ಯುದ್ಧ ಜಾಡ್ಯ ಮುಂತಾದವುಗಳನ್ನೂ ಲೆಕ್ಕಿಸದೆ ಭಾರತವು ಬದುಕಿ ಬಂದಿದೆ. ಮನುಷ್ಯನ ದುಷ್ಟ ಆಳಿಕೆ ಹಾಗೂ ದೈವದ ದುರ್ದೆಸೆಗಳಲ್ಲಿಯೂ ಭಾರತವು ಜಯಶಾಲಿಯಾಗಿ ಪ್ರಕಾಶಮಾನವಾಗಿದೆ. ಭಾರತದ ಚರಿತ್ರೆಯು ಪುರಾತನ ಪರಂಪರೆ ಹಾಗೂ ಹೊಸ ದೃಷ್ಟಿಗಳ ಸುಂದರ ಸಮನ್ವಯವಾಗಿದೆ. ”

— ಹುಮಾಯೂನ ಕಬೀರ

# ಹೊಸ ಹುಟ್ಟು

ನವೀನ ಜೀವನದ ಚಿಹ್ನೆಗಳು ಎಲ್ಲೆಡೆಯಲ್ಲಿಯೂ ಕಾಣತೊಡಗಿವೆ. ಒಂದು ಹೊಸ ಜಗತ್ತು ರೂಪಗೊಳ್ಳುತ್ತಿದೆಯೆಂಬುದಕ್ಕೆ ಭಾರತೀಯ ಜೀವನದಲ್ಲಿ ತಲೆದೋರಿರುವ ಅಶಾಂತಿಯೇ ಸಾಕ್ಷಿಯಾಗಿದೆ. ಹೊಸ ಸೂರ್ಯನು ಹುಟ್ಟಿ ಬರಬೇಕಾದರೆ ನಕ್ಷತ್ರಗಳು ಒಂದಕ್ಕೊಂದು ತಾಗಿ ಪುಡಿಗುಟ್ಟಿ ಹೋಗಬೇಕಾಗುತ್ತದೆ.

ತನ್ನ ಸಂಧಾನ ಹಾಗೂ ಸಮನ್ವಯ ಶಕ್ತಿಗಾಗಿ ಪುರಾತನ ಭಾರತವು ಪ್ರಖ್ಯಾತವಾಗಿದೆ. ಹೊಸ ಜಗತ್ತಿನಲ್ಲಿ ನೂತನತೆ ಹಾಗೂ ಅತೃಪ್ತಿ ತುಂಬಿವೆ. ಜೀವನದ ಐಕ್ಯವನ್ನು ಬೋಧಿಸುತ್ತಿದ್ದ ಪ್ರಾಚೀನ ಪರಂಪರೆಗೆ ಅರ್ವಾಚೀನ ಕಾಲದ ನ್ಯಾಯ ಹಾಗೂ ಸಮತೆಗಳ ಬೇಡಿಕೆ ಬಂದು ಸೇರಿ ಕೊಂಡಿದೆ. ಭಾರತದಲ್ಲಿ ಹೊಸ ಮಾನವತೆ ಹುಟ್ಟಿ ಬರುವ ಮೊದಲು ಜೀವನದ ಹಳೆಯ ಹಾಗೂ ಹೊಸ ಅರ್ಥಗಳೆರಡೂ ಇಲ್ಲಿ ಒಂದಕ್ಕೊಂದು ಮಸೆಯಬೇಕಾಗಿದೆ.

ಪುರಾತನ ಜಗತ್ತು ಇಂದು ಪರಸ್ಪರ ವಿರೋಧಾಭಿಪ್ರಾಯಗಳ ಯುದ್ಧ ಭೂಮಿಯಾಗಿದೆ. ಯುವಕರು ಈ ಕಾರ್ಯದಲ್ಲಿ ತಮ್ಮ ಪಾತ್ರವನ್ನು ಗೌರವಪೂರ್ಣವಾಗಿ ಆಡಬೇಕು. ಜೀವನ್ಮೃತವಾಗಿರುವ ಹಿಂದಿನ ನಾಗರಿ ಕತೆಯ ಒಳ್ಳೆಯ ಅಂಶಗಳನ್ನು ಅರಗಿಸಿಕೊಂಡು, ಬರಲಿರುವ ಜಾಗತಿಕ ನಾಗರಿಕತೆಗೆ ಅವರು ಅರ್ಹರಾಗಬೇಕು. ಹಿಂದಿನ, ಮಧ್ಯಕಾಲದ ಹಾಗೂ ಅರ್ವಾಚೀನ ಜಗತ್ತುಗಳ ಸಂಸ್ಕೃತಿಯನ್ನು ತಮ್ಮಲ್ಲಿ ಸಮನ್ವಯ ಮಾಡಿಕೊಳ್ಳುವುದೇ ಯುವಕರ ಮೇಲಿರುವ ಗುರುತರವಾದ ಜವಾಬ್ದಾರಿ ಯಾಗಿದೆ.

— ಹುಮಾಯೂನ ಕಬೀರ

# ನಾಳೆಯ ಜಗತ್ತು

ಸ್ವಾತಂತ್ರ್ಯದಲ್ಲಿ ವಿಶ್ವಾಸ ತಾಳಿ ನಾವು ಅದನ್ನು ಅನುಸರಿಸಿ ನಡೆಯುವುದಾದರೆ ನಮ್ಮನ್ನು ಅಂಜಿಸುತ್ತ ನಿಂತಿರುವ ಗಂಡಾಂತರಗಳೆಲ್ಲ ತಂತಾನೆ ಮಾಯವಾಗುವವು. ಇಂದಿನ ವಿನಾಶಕ ಶಕ್ತಿಗಳು ನಾಳೆಯು ನಮ್ಮ ಉನ್ನತಿಯ ಸಾಧನವಾಗಿ ಪರಿಣಮಿಸುವವು.

ಇದುವರೆಗೆ ಆದ ಶಕ್ತಿಯ ಅಪವ್ಯಯವನ್ನು ಕುರಿತು ನಾವು ಆಲೋಚಿಸಬೇಕು. ಶೋಧಗೊಳ್ಳಬೇಕಾಗಿರುವ ಅನಂತ ಜ್ಞಾನಕ್ಷೇತ್ರಗಳ ಬಗ್ಗೆ ನಾವು ಯೋಚನೆ ಮಾಡಬೇಕು. ಈ ಶತಮಾನದ ಆಶ್ಚರ್ಯಕಾರಕ ಶೋಧಗಳು ಭವಿಷತ್ಕಾಲದ ಅದ್ಭುತ ಸಾಧ್ಯತೆಗಳ ಒಂದು ಛಾಯೆ ಮಾತ್ರವೆಂಬುದನ್ನು ನಾವು ಅರಿತುಕೊಳ್ಳಬೇಕು. ಆಗ ಹಸಿವೆಯ ಕಿಚ್ಚು ಅಡಗಿ ದುರಾಸೆಯು ಉದಾತ್ತ ಧ್ಯೇಯವಾಗಿ ಮಾರ್ಪಟ್ಟು ಮನುಷ್ಯ ಮನುಷ್ಯರನ್ನು ಇಂದು ಮೂರವರಿಸಿರುವ ಅಂಜಿಕೆ ಅಸೂಯೆಗಳ ಸ್ಥಾನವನ್ನು ಸಮಾನತೆಯಿಂದ ಹುಟ್ಟಿಬರುವ ಸೌಹಾರ್ದವು ಆವರಿಸಿಕೊಳ್ಳುವುದು.

ಸಕಲರ ಬೌದ್ಧಿಕ ಶಕ್ತಿಯ ವಿಕಾಸಕ್ಕೆ ಅನುಕೂಲತೆಗಳು ಏರ್ಪಟ್ಟಾಗ ನಮ್ಮ ನಾಗರಿಕತೆಯು ಏರಬಹುದಾದ ಎತ್ತರವನ್ನು ಯಾರು ಅಳೆಯಬಲ್ಲರು? ಆ ವಿಚಾರವನ್ನು ಬರೆಹದಲ್ಲಿ ಒಡಮೂಡಿಸುವುದಕ್ಕೆ ಶಕ್ತಿ ಸಾಲದು. ಅದು ಕವಿಗಳು ಹಾಡುತ್ತ ಬಂದಿರುವ, ದಾರ್ಶನಿಕರು ತೋರಿಸುತ್ತ ಬಂದಿರುವ ಸುವರ್ಣ ಯುಗವಾಗಿದೆ. ಅದರ ಜಾಜ್ವಲ್ಯಮಾನಪ್ರಭೆಯ ಮನುಷ್ಯನನ್ನು ಭಾವಪರವಶನನ್ನಾಗಿ ಮಾಡಿದೆ. ಅದು ದೈವೀ ಶಕ್ತಿಯ ಪರಕಾಷ್ಠ ರೂಪ. ಪ್ರಪಂಚದಲ್ಲಿ ಮೂಡಿಬರುವ ದೇವತಾ ರಾಜ್ಯ. ಶಾಂತಿದೇವನ ಆಳಿಕೆಯ ಶಾಂತಿಸುಹಾಸ.

— " ಪ್ರಗತಿ ಮತ್ತು ದಾರಿದ್ರ್ಯ " ದಿಂದ

# ಧರ್ಮದ ಅರಿವು

ಮಾರ್ಕ್ಸ್ ಮತ್ತು ಅವನ ಅನುಯಾಯಿಗಳು ಸಾಧಿಸಬೇಕೆಂದಿರುವುದು ಬಡತನದ ನಾಶವನ್ನು. ನಾಡಿನ ಸಂಪತ್ತು ದುಡಿಯುವವರಿಗೆ ಸೇರಿದ್ದು. ಇದುವರೆಗೆ ಸಿರಿವಂತರು ಬಡವರನ್ನು ದುಡಿಸಿ, ಅವರ ದುಡಿಮೆಯ ಮೇಲೆ ತಮ್ಮ ಕೀರ್ತಿ ಪ್ರತಿಷ್ಠೆಗಳನ್ನು ಕಟ್ಟಿದರು. ಇನ್ನು ಮುಂದೆ ನಾಡಿನ ಸಂಪತ್ತು ದುಡಿಯುವವರದಾಗಬೇಕು. ದರಿದ್ರ ಧನವಂತ ಎಂಬ ಭೇದ ನಾಶವಾಗಬೇಕು, ನಿಜ.

ಆದರೆ ಈ ಗುರಿಯನ್ನು ಸಾಧಿಸಲು ಧಾರ್ಮಿಕದೃಷ್ಟಿ ಬೇಕು. ಧರ್ಮದ ಅರಿವಿನಿಂದಲೇ ಇಂಥ ಪ್ರಪಂಚವನ್ನು ಶಾಶ್ವತವಾಗಿ ಕಟ್ಟಲು ಸಾಧ್ಯ. ಬದುಕಿದರೆ ಸಾಲದು, ಚೆನ್ನಾಗಿ ಬದುಕಬೇಕು ಎಂಬ ಆಸೆ ಮನುಷ್ಯನಲ್ಲಿದೆ. ಆ ಆಸೆ ಈಡೇರಲು ಧರ್ಮದ ಅರಿವಾಗಬೇಕು. ಸತ್ಯಕ್ಕೆ ಮರೆಹೊಕ್ಕು ಸ್ವಾರ್ಥದಿಂದ ಬಿಡುಗಡೆ ಹೊಂದುವುದೇ ಧರ್ಮದ ಮೂಲಮಂತ್ರ; ನಮ್ಮ ನಾಗರಿಕತೆಯನ್ನು ಉಳಿಸಬಲ್ಲ ಸಂಜೀವಿನಿ. ನಾಗರಿಕತೆಯ ಸಾರವಿರುವುದು ಅದು ಗಳಿಸಿರುವ ಧನ, ಸಂಪತ್ತು, ಪ್ರತಿಷ್ಠೆಗಳಲ್ಲಲ್ಲ; ಆದರೆ ಮನುಷ್ಯನ ಬುದ್ಧಿಶಕ್ತಿಯ ಬೆಳವಣಿಗೆಯಲ್ಲಿ, ನೀತಿ ಧರ್ಮಗಳ ತಿಳಿವಳಿಕೆಯಲ್ಲಿ! ಬದುಕನ್ನು ಸಾರ್ಥಕಪಡಿಸಿಕೊಳ್ಳಬೇಕು ಎಂಬ ಆಸೆ, ಮತ್ತು ಅದನ್ನು ಸಾಧಿಸುವ ರೀತಿಯಲ್ಲಿ!

ಧರ್ಮದ ನಿಜವಾದ ಅರಿವು ಶಾಂತಿಯುತವಾದ ಚಳುವಳಿಯಿಂದ ಮಾನವ ಚರಿತ್ರೆಯನ್ನು ಬದಲಾಯಿಸಲು ಸಾಧನವಾಗುತ್ತದೆ. ಮಾನವ ವರ್ಗವೆಲ್ಲ ಒಂದು, ಒಬ್ಬ ದೇವನ ಮಕ್ಕಳು, ಈ ಪ್ರಪಂಚವೆಲ್ಲ ಒಂದು ಕುಟುಂಬ, ಮೂರು ಲೋಕಗಳೂ ಸ್ವದೇಶ ಎಂಬ ಭಾವನೆ ಮನುಷ್ಯನಲ್ಲಿ ಬೇರೂರಿದರೆ ಹೊಸ ಪ್ರಪಂಚದ ಸಂಘಟನೆಯಾಗುತ್ತದೆ.

— ಡಾ|| ಸರ್ವಪಳ್ಳಿ ರಾಧಾಕೃಷ್ಣನ್

# ಮುಖ ಹಾಗೂ ಮನಸ್ಸು

ನಿಮ್ಮ ಸ್ನೇಹಿತನು ಚೆನ್ನಾಗಿಲ್ಲವೆಂಬುದಾಗಿ ನೀವು ಹೇಳುತ್ತೀರಿ. ಆದರೆ ಅವನನ್ನು ನೀವು ನಿಜವಾಗಿಯೂ ಬಲ್ಲಿರಾ ? ನಿಮ್ಮ ಬಗ್ಗೆ ಅವನು ಏನನ್ನು ಆಲೋಚಿಸುತ್ತಿದ್ದಾನೆಂಬುದು ನಿಮಗೆ ಗೊತ್ತಿದೆಯೇ ? ನಿಮ್ಮ ಬಗ್ಗೆ ಅವನ ಭಾವನೆಗಳೇನು ? ನಿಮ್ಮೆದುರು ತೋರುವ ಮುಖವಾಡದ ಹಿಂದೆ ಹುದುಗಿರುವ ಅವನ ಯೋಜನೆಗಳೇನು ?

ಮುಖವು ಮನಸ್ಸಿನ ಕನ್ನಡಿ ಎಂಬ ಮಾತನ್ನು ನಾನು ಒಪ್ಪುವುದಿಲ್ಲ. ಮನುಷ್ಯನ ಮನಸ್ಸು ಅನೇಕ ವಿಧವಾದ ಭಾವನೆಗಳಿಗೆ ಆಶ್ರಯಸ್ಥಾನ ವಾಗಿದೆ. ಅವುಗಳಲ್ಲಿ ನಮ್ಮ ಮುಖವು ಕೆಲವೊಂದನ್ನು ಮಾತ್ರ ಪ್ರದರ್ಶಿಸ ಬಲ್ಲದು. ಮನಸ್ಸಿನ ಅನೇಕ ವ್ಯಾಪಾರಗಳನ್ನು ನಾವು ಮುಖದ ಒಂದೆರಡು ರೀತಿಗಳಿಂದ ಪ್ರದರ್ಶನ ಮಾಡಿ ತೋರಿಸುತ್ತೇವೆ. ಮನುಷ್ಯನ ನಗೆಯಲ್ಲಿ ನಾವು ರಾಗವನ್ನು, ದ್ವೇಷವನ್ನು, ವೈರವನ್ನು, ಆಶ್ಚರ್ಯವನ್ನು, ರೋಸಿಗೆಯನ್ನು ಕಾಣಬಹುದು. ಅರ್ಥವಿಲ್ಲದ ಕೆಲವು ಕೃತಿಗಳಿಗೆ ಉದ್ದೇಶವಿದೆಯೆಂದು ತರ್ಕಮಾಡುವುದರಿಂದಲೇ ದಿನ ದಿನದ ಜೀವನದಲ್ಲಿ ಅನೇಕ ಅನರ್ಥಗಳು ಸಂಭವಿಸುತ್ತಿವೆ. ವ್ಯಾಪಾರಕ್ಕೆ ಕುಳಿತ ಮನುಷ್ಯನು ಕೆಮ್ಮು ಬಂದಿವೆ ಯೆಂದು ಹೊರಗೆ ಎದ್ದು ಹೋದುದನ್ನೇ ಅವಲಕ್ಷಣವೆಂದು ಭಾವಿಸಿ ವ್ಯಾಪಾರವನ್ನು ಮುರಿಗಡೆ ಮಾಡಿಕೊಂಡ ಉದಾಹರಣೆಗಳಿಗೇನೂ ಕೊರತೆಯಿಲ್ಲ.

ನಾವು ಎಷ್ಟೇ ಪ್ರಯತ್ನಿಸಿದರೂ ನಮ್ಮ ಬಾಹ್ಯ ವ್ಯಾಪಾರಗಳು ನಮ್ಮ ಅಂತರಂಗದ ಸ್ವರೂಪವನ್ನು ಪ್ರದರ್ಶಿಸಲಾರವು. ಬಹಿರಂಗ ವ್ಯಾಪಾರಗಳು ಮನಸ್ಸಿನ ಸರಿಯಾದ ಚಿತ್ರವನ್ನು ನಿರೂಪಿಸುವುದು ಎಂದೆಂದಿಗೂ ಸಾಧ್ಯವಿಲ್ಲ. ನೋಡಿ ಹೇಳುವುದಕ್ಕಿಂತಲೂ ಅರಿತು ಹೇಳು ವುದು ಯಾವಾಗಲೂ ಮೇಲು.

— "ಜ್ಞಾನ" ದಿಂದ

# ಮಂತ್ರಿ

ಸಣ್ಣ ಮನಸ್ಸಿನವನೊಬ್ಬನು ರಾಷ್ಟ್ರದ ಮಂತ್ರಿಯಾಗಿ ಕಾರ್ಯ ನಿರ್ವಹಿಸುತ್ತಿರುವುದನ್ನು ನೀನು ಎಂದಾದರೂ ಊಹಿಸಬಲ್ಲೆಯಾ? ಆತನು ಆ ಸ್ಥಾನಕ್ಕೆ ಬರುವ ಮೊದಲು ಅದನ್ನು ಸಂಪಾದಿಸಬೇಕೆಂಬ ಆತುರದಲ್ಲಿರುತ್ತಾನೆ. ಅದನ್ನು ಸಂಪಾದಿಸಿದ ಮೇಲೆ ಅದು ತನ್ನನ್ನು ಬಿಟ್ಟು ಹೋದೀತೆಂಬ ಕಳವಳದಲ್ಲಿರುತ್ತಾನೆ. ಈ ಬಗೆಯ ಕಳವಳ ಆತನಲ್ಲಿ ಆರಂಭವಾದರೆ ಅದನ್ನು ಹಿಡಿದುಕೊಳ್ಳಲು ಅವನು ಏನು ಮಾಡುವುದಕ್ಕೂ ಹಿಂದೆ ಮುಂದೆ ನೋಡತಕ್ಕವನಲ್ಲ.

ಸರಕಾರದ ಉಚ್ಚಸ್ಥಾನದಲ್ಲಿರುವವನು ಹಣ ಶೇಖರಿಸಬೇಕೆಂಬ ಹವ್ಯಾಸಕ್ಕೆ ಬಿದ್ದರೆ ಅಲ್ಪರನ್ನು ಅಧಿಕಾರ ಸ್ಥಾನಕ್ಕೆ ತರಬೇಕಾಗುತ್ತದೆ. ದೇಶಕ್ಕೆ ಕಲ್ಯಾಣ ಮಾಡಬೇಕೆಂದು ಅವನು ಇಚ್ಛೆ ಪಡಬಹುದು. ಆದರೆ ದೇಶವನ್ನು ನಿಜವಾಗಿಯೂ ಆಳುವವರು ಈ ಅಲ್ಪರೇ ಆದುದರಿಂದ ದೇಶಕ್ಕೆ ಗಂಡಾಂತರ ಕಟ್ಟಿಟ್ಟದ್ದು. ಆತನ ಸದಿಚ್ಛೆಗಳಿಂದ ಯಾವ ಪ್ರಯೋಜನವೂ ಆಗಲಾರದು. ಅದಕ್ಕೆಂತಲೇ ಒಂದು ದೇಶದ ಭೌತಿಕ ಅಭಿವೃದ್ಧಿಯು ಸತ್ಯ ಪಥದಿಂದ ಸಾಧಿತವಾಗಬೇಕಲ್ಲದೆ ಭೌತಿಕವಾದದಿಂದಲ್ಲವೆಂದು ಹೇಳುತ್ತಾರೆ.

ನಿಸ್ಪೃಹತೆ ಹಾಗೂ ಕಳಕಳಿಯಿಂದ ಕೆಲಸ ಮಾಡಬಲ್ಲ ಒಬ್ಬನೇ ಒಬ್ಬ ಮಂತ್ರಿ ನಮಗಿದ್ದರೂ ಸಾಕು. ಉಳಿದ ಸಾಮರ್ಥ್ಯಗಳು ಆತನಲ್ಲಿ ಇರದಿದ್ದರೂ ಅಷ್ಟೇ! ಇತರರ ಬಗ್ಗೆ ತಾಳ್ಮೆ ಹಾಗೂ ಔದಾರ್ಯವನ್ನು ತೋರುವ ದೊಡ್ಡ ಮನಸ್ಸು ಆತನಿಗಿರಲಿ. ಇನ್ನೊಬ್ಬನಲ್ಲಿ ಸಾಮರ್ಥ್ಯ, ಕರ್ತೃತ್ವ ಶಕ್ತಿಗಳಿದ್ದರೆ ಆತನು ಸಂತೋಷಪಡುತ್ತಾನೆ, ಕರುಬುವುದಿಲ್ಲ. ಅಂಥ ಮನುಷ್ಯನು ನಿಜವಾಗಿಯೂ ರಾಷ್ಟ್ರದ ಅಮೌಲ್ಯ ಸಂಪತ್ತು. ರಾಷ್ಟ್ರವನ್ನು ಆತನ ಕೈಯಲ್ಲಿ ಒಪ್ಪಿಸಿದರೆ ಯಾವ ಬಗೆಯಿಂದಲೂ ಯಾರೊಬ್ಬರೂ ಭಯಗೊಳ್ಳಬೇಕಾದ ಕಾರಣವಿಲ್ಲ.

— ಕನ್‌ಫ್ಯೂಷಿಯಸ್

# ಸ್ನೇಹಿತ

ಸ್ನೇಹವು ಮನುಷ್ಯನಿಗೆ ದೊರೆತ ಒಂದು ಅಮೌಲ್ಯವಾದ ವರವಾಗಿದೆ. ತನ್ನ ನಲಿವು ನೋವುಗಳನ್ನು ಹೇಳಿಕೊಳ್ಳಲು ಮನುಷ್ಯನಿಗೆ ಸ್ನೇಹಿತ ನೊಬ್ಬನು ಬೇಕೇಬೇಕು. ಏಕಾಂಗಿಯಾದ ಮನುಷ್ಯನು ಅವುಗಳನ್ನು ನುಂಗಿಕೊಂಡು ಹೃದಯಭಾರದಿಂದ ಮತ್ತಷ್ಟೂ ನರಳಬೇಕಾಗುತ್ತದೆ.

ಸ್ನೇಹಿತನ ಉಪದೇಶ ತಪ್ಪಿರಲಿ, ಒಪ್ಪಿರಲಿ, ಆತನೊಂದಿಗೆ ಮಾತ ನಾಡಿದರೆ ನಮ್ಮ ಮನಸ್ಸು ತಿಳಿಯಾಗುತ್ತದೆ. ನಾವು ಇಡೀ ದಿನವೆಲ್ಲ ಧ್ಯಾನ ಮಾಡಿದರೂ ಲಭಿಸಲಾರದ ಮನಶ್ಶಾಂತಿಯು ಸ್ನೇಹಿತನೊಂದಿಗೆ ಒಂದು ಗಂಟೆಯಕಾಲ ಮಾತನಾಡಿದರೂ ಲಭಿಸುತ್ತದೆ. ಸ್ನೇಹಿತನ ಉಪ ದೇಶವು ಅನೇಕ ಸಂದರ್ಭಗಳಲ್ಲಿ ನಮ್ಮ ತಿಳಿವಳಿಕೆಗಿಂತಲೂ ಸರಿಯಿರುತ್ತದೆ. ನಮ್ಮ ಉತ್ಕರ್ಷದ ಕಳಕಳಿಯೇ ಸ್ನೇಹಿತನಲ್ಲಿ ತುಂಬಿರುವುದಲ್ಲವೇ ? ಪುಸ್ತಕದ ನಿರ್ಣಯಕ್ಕಿಂತಲೂ ಸ್ನೇಹಿತನ ಉಪದೇಶವು ಸರಿಯಿರುತ್ತದೆ.

ನಮ್ಮ ಸ್ನೇಹಿತನಿಗಿಂತ ಅಪರಿಚಿತನೊಬ್ಬನು ಬುದ್ಧಿಶಾಲಿಯಾಗಿ ದ್ದಾನೆಂದು ಸ್ನೇಹಿತನ ಉಪದೇಶವನ್ನು ಬದಿಗಿರಿಸಿ ಅಪರಿಚಿತನು ಹೇಳಿ ದಂತೆ ನಾವು ಆಚರಿಸಕೂಡದು. ಆ ಅಪರಿಚಿತ ಗೃಹಸ್ಥನು ನಮ್ಮ ವಿಷಯ ವನ್ನು ಏನು ಬಲ್ಲನು ? ಸ್ನೇಹಿತನಾದವನು ನಮ್ಮ ಒಳಹೊರಗೆಲ್ಲವನ್ನೂ ಬಲ್ಲನು. ನಿಪುಣನಾದ ಹೊಸ ವೈದ್ಯನಿಗಿಂತಲೂ ಪರಿಚಿತನಾದ ಹಳೆಯ ವೈದ್ಯನು ಯಾವಾಗಲೂ ಲೇಸು. ಸ್ನೇಹಿತನೊಂದಿಗೆ ಜಗಳವಾಡುವುದೆಂದರೆ ಮೂರ್ಖತನದ ಪರಮಾವಧಿ.

ಸ್ನೇಹ ಸಂಬಂಧದಲ್ಲಿ ಉಂಟಾದ ವಿರಸವನ್ನು ಸರಿಪಡಿಸಲು ಪ್ರಯತ್ನ ಪಡಬೇಕು. ಯಶವನ್ನು ಸಂಪಾದಿಸಬೇಕು. ಅಂಥದೇ ಇನ್ನೊಂದು ಸ್ನೇಹವನ್ನು ಕಟ್ಟಬೇಕಾದರೆ ಇನ್ನೆಷ್ಟು ವರ್ಷ ಕಾಯಬೇಕೋ ಏನೋ !

— ಒಬ್ಬ ಸ್ನೇಹಿತ

# ಇನ್ನೊಂದು ಚಿತ್ರ

ಎಲ್ಲಿ ನೀತಿ, ಜಾಣ್ಮೆ ಹಾಗೂ ದೇಶಾಭಿಮಾನ ಇವೆಯೋ ಅಲ್ಲಿ ಸರಕಾರವು ಪ್ರಜಾಸತ್ತಾತ್ಮಕವಾದಷ್ಟೂ ಒಳ್ಳೆಯದಾಗುತ್ತದೆ. ಆದರೆ ಅವು ಎಲ್ಲಿ ಇಲ್ಲವೋ ಅಲ್ಲಿ ಸರಕಾರವು ಪ್ರಜಾಸತ್ತಾತ್ಮಕವಾದಷ್ಟೂ ಅಹಿತವಾಗುತ್ತದೆ. ಮಲಿನ ಪ್ರಜಾಸತ್ತೆಯು ಮಲಿನ ಸರ್ವಸತ್ತಾಧಿಕಾರಕ್ಕಿಂತ ಹೇಯವಾಗದಿದ್ದರೂ ರಾಷ್ಟ್ರದ ನೀತಿಯ ಮೇಲೆ ಅದರ ಪರಿಣಾಮಗಳು ಮಾತ್ರ ಅದಕ್ಕಿಂತಲೂ ದುಷ್ಟವಾಗುತ್ತವೆ. ಯಾರು ಭಿಕ್ಷೆ ಬೇಡಬೇಕೋ, ಕದಿಯಬೇಕೋ, ಉಪವಾಸ ಬಿದ್ದು ಸಾಯಬೇಕೋ ಅಂಥ ತಿರುಕರಿಗೆ, ನಿರ್ಗತಿಕರಿಗೆ, ಬೀದಿಯ ಭಿಕಾರಿಗಳಿಗೆ ಮತಾಧಿಕಾರವನ್ನು ಕೊಡುವುದೆಂದರೆ ವಿನಾಶವನ್ನು ಆಹ್ವಾನಿಸಿದಂತೆಯೇ ಸರಿ.

ಪುರಾತನ ರಾಜ್ಯಗಳು ಕೆಲ ಸಮಯಗಳಲ್ಲಿ ಯೋಗ್ಯರಾದವರನ್ನು ಅಧಿಕಾರ ಸ್ಥಾನದಲ್ಲಿ ಇರಿಸುತ್ತಿದ್ದವು. ಆದರೆ ಶಿಥಿಲವಾದ ಪ್ರಜಾಸತ್ತೆಯಲ್ಲಿ ಅಯೋಗ್ಯರ ಕಡೆಗೇ ಅಧಿಕಾರ ಹೋಗುತ್ತದೆ. ಪ್ರಾಮಾಣಿಕತೆ ಹಾಗೂ ದೇಶಾಭಿಮಾನದ ಸ್ಥಳವನ್ನು ಅನೀತಿ ಆವರಿಸಿಕೊಳ್ಳುತ್ತದೆ. ಶ್ರೇಷ್ಠರಾದವರು ಮೂಲೆಗುಂಪಾಗಿ ಕನಿಷ್ಠರಾದವರು ಮೇಲಕ್ಕೆ ಬರುತ್ತಾರೆ. ದುಷ್ಟನನ್ನು ಹಿಂದಕ್ಕೆ ತಳ್ಳಿ ಮಹಾ ದುಷ್ಟನು ಮುಂದೆ ಬಂದು ನಿಲ್ಲುತ್ತಾನೆ. ಅಧಿಕಾರಕ್ಕೆ ಬಂದವರ ಗುಣಗಳನ್ನೇ ರಾಷ್ಟ್ರವು ಅಳವಡಿಸಿಕೊಳ್ಳಬೇಕಾಗಿ ಬರುವುದರಿಂದ ಕೊನೆಗೆ ರಾಷ್ಟ್ರ ನೀತಿಯೇ ಪತನವಾಗಿ ಸ್ವತಂತ್ರರಾದ ಜನ ಪುನಃ ಗುಲಾಮರಾಗಿ ಪರಿವರ್ತನಗೊಳ್ಳಬಹುದು.

ವಂಶಪಾರಂಪರ್ಯವಾದ ಯಾವ ಅರ್ಹತೆಗಳೂ ಇಲ್ಲದಿರುವಲ್ಲಿ ಜನರು ಅನೀತಿ ಅವ್ಯವಹಾರಗಳಿಂದ ಐಶ್ವರ್ಯ ಹಾಗೂ ಅಧಿಕಾರಗಳನ್ನು ಸೆಳೆದುಕೊಳ್ಳುತ್ತಾರೆ. ಈ ಅಗ್ರಾಹ್ಯವಾದ ಗುಣಗಳನ್ನು, ಆರಂಭದಲ್ಲಿ ತಾಳಿಕೊಳ್ಳುವುದು ಆಗದೇ ಹೋದರೂ ಕಾಲಕ್ರಮದಲ್ಲಿ ಅದು ರೂಢಿಗೊಂಡು ಕೊನೆಗೆ ಪೂಜೆಯಲ್ಲಿ ಪರ್ಯವಸಾನಗೊಳ್ಳುತ್ತದೆ. ಕೊಳೆಯಾದ ಪ್ರಜಾ ಸರಕಾರವು ಕೊನೆಗೆ ಇಡೀ ಜನತೆಯನ್ನೇ ಕೊಳೆ ಮಾಡುತ್ತದೆ. ಜನತೆಗೆ ಒಮ್ಮೆ ಕೊಳೆ ಬಡಿದುಕೊಂಡಿತೆಂದರೆ ಆಮೇಲೆ ಬಿಡುಗಡೆ ಇಲ್ಲ. ಆಗ ಜನತೆಯಲ್ಲಿ ಇರುವ ಜೀವವೆಲ್ಲ ಹೋಗಿ ದೇಹ ಮಾತ್ರ ಉಳಿದುಕೊಳ್ಳುತ್ತದೆ.

— "ಪ್ರಗತಿ ಹಾಗೂ ದಾರಿದ್ರ್ಯ"ದಿಂದ

# ಭಾರತದ ಪರಂಪರೆ

ಸೊನ್ನೆಯಿಂದ ಹಿಡಿದು ಅನಂತದವರೆಗೆ ಅಸಂಖ್ಯಾತ ಶೋಧಗಳನ್ನು ಮಾಡಿದ ಶ್ರೇಯಸ್ಸು ಭಾರತಕ್ಕೆ ಇದೆ. ಅವೆಲ್ಲ ಶೋಧಗಳೂ ಜ್ಞಾನ, ನೀತಿ ಹಾಗೂ ಅಧ್ಯಾತ್ಮದ ತಳಹದಿಯ ಮೇಲೆ ನಿಂತಿವೆ.

ಭಾರತವು ಕೊಟ್ಟು ಬದುಕಿದೆಯಲ್ಲದೆ ಬೇಡಿಕೊಂಡು ಬದುಕಿಲ್ಲ. ತನ್ನ ಉಜ್ವಲ ಚರಿತ್ರೆಯ ಸುದೀರ್ಘ ಕಾಲದಲ್ಲೆಲ್ಲ ಅದು ಸಾಂಸ್ಕೃತಿಕ ದಾನಗಳನ್ನು ಜಗತ್ತಿಗೆ ಕೊಡಮಾಡುತ್ತಲೇ ಬಂದಿದೆ. ಇಲ್ಲಿಯ ಸಾಂಖ್ಯ ತತ್ತ್ವಜ್ಞಾನವು ಗ್ರೀಕ ದೇಶದ ಮೇಲೆ ವಿಶೇಷ ಪ್ರಭಾವವನ್ನು ಬೀರಿದೆ. ಆ ಪ್ರಭಾವದ ಫಲವೇ ಪ್ಲೇಟೋ ಎಂದೆನ್ನಬಹುದು. ಹಿಂದೀಯರು ಕಂಡು ಹಿಡಿದ ದಶಾಂಶ ಪದ್ಧತಿಯೇ ಆಧುನಿಕ ಗಣಿತ ಶಾಸ್ತ್ರದ ತಳಹದಿಯಾಗಿದೆ. ನ್ಯೂಟನ್ನನು ಕಂಡು ಹಿಡಿದನೆಂದು ಹೇಳುವ ಗುರುತ್ವಾಕರ್ಷಣೆಯ ತತ್ತ್ವವು ಹಿಂದೀಯರಿಗೆ ಎಂದೋ ತಿಳಿದಿತ್ತು. ಔಷಧಿ ಹಾಗೂ ಶಸ್ತ್ರಕ್ರಿಯೆ ಮುಂತಾದ ಶಾಸ್ತ್ರಗಳನ್ನು ಹಿಂದೀಯರು ಪುರಾತನ ಕಾಲದಲ್ಲಿಯೇ ಅರಿತವರಾಗಿದ್ದರು. ಆ ಶಾಸ್ತ್ರಗಳನ್ನೇ ಮುಂದೆ ಅರಬರೂ, ಅನಂತರ ಈಗ ಯುರೋಪ್ಯರೂ, ತಮ್ಮ ಔಷಧಿ ಶಾಸ್ತ್ರದ ಬುನಾದಿಯಾಗಿ ತೆಗೆದುಕೊಂಡಿದ್ದಾರೆ.

ಇಂಥ ಭವ್ಯ ಪರಂಪರೆಯುಳ್ಳ ಜನ ಯಾವ ಕಾಲಕ್ಕೂ ಸಾಯಲಾರರು. ಆಕ್ರಮಣಶೀಲವಾದ ಹೊಸ ನಾಗರಿಕತೆಯು ಅವರನ್ನು ಕೆಲ ಕಾಲ ಹಿಂದಿಟ್ಟಿರಬಹುದು. ಆದರೆ ಅವರು ಮತ್ತೆ ಗತಕಾಲದ ತಮ್ಮ ಪರಂಪರೆಯ ಪುನರ್ದರ್ಶನ ಪಡೆದುಕೊಂಡಿದ್ದಾರೆ. ಆ ದರ್ಶನವನ್ನು ತಂದುಕೊಡಲು ಮಹಾತ್ಮಾ ಗಾಂಧಿಯವರು ಒಂದು ಸಾಧನವಾದರೆನ್ನಬಹುದು.

— "ಏಶಿಯನ್ ರಾಷ್ಟ್ರಗಳು'' ಎಂಬ ಪುಸ್ತಿಕೆಯಿಂದ

# ಇತಿಹಾಸ

ಇತಿಹಾಸವನ್ನು ಹಾಗೂ ಅಂತರರಾಷ್ಟ್ರೀಯ ವ್ಯವಹಾರವನ್ನು ಎರಡು ಭಿನ್ನ ಭಿನ್ನ ದೃಷ್ಟಿಕೋನಗಳಿಂದ ನೋಡಲಾಗುತ್ತಿದೆ. ಒಂದು ರಾಷ್ಟ್ರೀಯ ಪಕ್ಷಪಾತ ದೃಷ್ಟಿ. ಇನ್ನೊಂದು ಅಂತರರಾಷ್ಟ್ರೀಯ ಅಲಿಪ್ತ ದೃಷ್ಟಿ.

ಪ್ರಪಂಚದಲ್ಲಿ ಒಂದೇ ಒಂದು ರಾಷ್ಟ್ರವು ಮುಖ್ಯವಾದದ್ದೇನೋ ಎನ್ನುವಂತೆ ಇಂದು ಇತಿಹಾಸ ನಿರ್ಮಾಣ ನಡೆದಿದೆ. ಇತಿಹಾಸದ ವರ್ಣಮಯ ದಿಗ್ದರ್ಶನದಲ್ಲಿ ಉಳಿದ ರಾಷ್ಟ್ರಗಳೆಲ್ಲವೂ ಆ ರಾಷ್ಟ್ರದ ತಾತ್ಕಾಲಿಕ ಸ್ನೇಹಿತರೆಂದೋ, ಕ್ಷಣಿಕ ವೈರಿಗಳೆಂದೋ ಅಲ್ಲಿಯ ಜನತೆಯ ವೈಭವಪೂರ್ಣ ಜೀವನದಲ್ಲಿ, ಮುಖದೋರಿ ಮರೆಯಾಗಿ ಹೋಗುತ್ತವೆ.

ಯುರೋಪದಲ್ಲಿ ಮೂವತ್ತು ವರ್ಷಗಳ ಮನೆಮುರುಕ ಕಾಳಗ ನಡೆದರೂ ಅದು ಇಂಗ್ಲೀಷ್ ಇತಿಹಾಸಕಾರನ ದೃಷ್ಟಿಯಲ್ಲಿ ಮಹತ್ವದ್ದಲ್ಲ ! ಆದರೆ ನಿಜವಾದ ಜಾಗತಿಕ ಇತಿಹಾಸಕಾರನಿಗೆ ಒಂದು ರಾಜಮನೆತನದ ಏಳು ಬೀಳುಗಳಂತೆಯೇ ರಾಷ್ಟ್ರ ರಾಷ್ಟ್ರಗಳಲ್ಲಿ ನಡೆದಿರುವ ಶಕ್ತಿಯ ಸಮೀಕರಣ ಹಾಗೂ ವಿಂಗಡಿಕೆಗಳೂ ಮುಖ್ಯವಾದವುಗಳು. ಒಂದು ಪಂಗಡಕ್ಕೆ ಒದಗುವ ಜಯಾಪಜಯುಗಳಿಗಿಂತಲೂ ಪ್ರಪಂಚದ ಕೋಟ್ಯಾವಧಿ ಜನತೆಯ ಸುಖ–ದುಃಖಕ್ಕೆ ಕಾರಣವಾಗುತ್ತವೆಯೆಂದು ಅವುಗಳಿಗೆ ಮಹತ್ವವಿದೆ. ಈ ಪರೀಕ್ಷೆಗೆ ಒಳಪಡಿಸಿದರೆ ನಮ್ಮೀ ಕಾಲದ ಯುದ್ಧಗಳೆಲ್ಲವೂ ದೀರ್ಘ ರೋಗದ ಭಿನ್ನ ಭಿನ್ನ ಅವಸ್ಥೆಗಳೆಂದು ಹೇಳಬಹುದು. ಪಂಗಡಗಳ ಬದಲಾವಣೆ ಅಥವಾ ಪುನರ್ವಿಮರ್ಶೆ ನಿಮಿತ್ತ ಮಾತ್ರವಾದದ್ದು.

— ರೇನಾರ್ಡ್ ವೆಸ್ಟ್

# ಪ್ರಕೃತಿಯ ವಶೀಕರಣ

ಮನುಷ್ಯನು ಇನ್ನೊಂದು ದೇಶವನ್ನು ನಾಶಮಾಡುವುದಕ್ಕೆ ಹೋಗದೆ ಈಗ ಯುದ್ಧವನ್ನು ನಾಶ ಮಾಡಬೇಕಾಗಿದೆ. ಎರಡು ಚಿಕ್ಕ ವಿಮಾನಗಳು ಇಂದು ಜಗತ್ತಿನ ಮಹಾ ನಗರವನ್ನೇ ಅವಶೇಷವೊಂದೂ ಉಳಿಯದಂತೆ ನಿರ್ಮೂಲನಗೊಳಿಸಿಬಿಡಬಹುದು. ಯುದ್ಧದ ಉತ್ಸುಕತೆ ಇಂದು ಯಾರ ಲ್ಲಿಯೂ ಉಳಿದಿಲ್ಲ. ಅಣುಯುದ್ಧ ನಡೆಯಿತೆಂದರೆ ಪ್ರತಿಯೊಬ್ಬ ನಾಗರಿ ಕನೂ ಆ ಯಜ್ಞಕ್ಕೆ ಬಲಿಯಾಗಬೇಕಾಗುತ್ತದೆ. ಯುದ್ಧವನ್ನು ನಿರ್ಮೂಲ ಗೊಳಿಸಬೇಕಾದರೆ ಬಿಳಿದು-ಕಪ್ಪು, ಹಳದಿ-ಕೆಂಪು ಎಂಬ ಭಾವನೆ ಅಳಿದು ಜಗತ್ತಿನ ಮಾನವರಿಗೆಲ್ಲ ಸರಿಯಾದ ಬದುಕಿನ ವಾತಾವರಣವು ಇಲ್ಲಿ ನಿರ್ಮಾಣಗೊಳ್ಳಬೇಕು. ಪ್ರಪಂಚದ ಯೋಗ್ಯ ವಸ್ತುಗಳು ಸರ್ವರ ಭೋಗ್ಯಕ್ಕೂ ದೊರೆಯಬೇಕು.

ಇವೆಲ್ಲ ದೊಡ್ಡ ಶಬ್ದಗಳೆಂದು ತೋರಬಹುದು. ಅಣುಶಕ್ತಿಯ ಜ್ಞಾನ ವನ್ನು ಸಂಪಾದಿಸುವುದರಲ್ಲಿಯೇ ಈ ಪ್ರಶ್ನೆಗೆ ಸೂಕ್ತ ಪರಿಹಾರವಿದೆ. ಶಕ್ತಿಯನ್ನು ಆಧೀನದಲ್ಲಿಟ್ಟುಕೊಳ್ಳುವ ಶಕ್ತಿಯು ಇಂದು ಮನುಷ್ಯನ ಹಸ್ತ ಗತವಾಗಿದೆ. ಪ್ರಕೃತಿಯನ್ನು ವಶೀಕರಣ ಮಾಡಿಕೊಳ್ಳುವ ಕೊನೆಯ ಮೆಟ್ಟಿ ಲನ್ನು ಮನುಷ್ಯನು ಈಗ ಏರಿ ನಿಂತಿದ್ದಾನೆ. ಮಾನವ ಪ್ರಪಂಚದ ಮೂಲ ಭೂತ ಗುಟ್ಟನ್ನೂ ಅವನು ಇಂದು ಕಂಡುಕೊಂಡಿದ್ದಾನೆ. ಅವನಿಗಾಗಿ ಎಲ್ಲ ವನ್ನೂ ಮಾಡಬಲ್ಲ ಶಕ್ತಿ ಆತನಲ್ಲಿರುವಾಗ ಅವನು ಅದನ್ನು ಬುದ್ಧಿವಂತಿಕೆ ಯಿಂದ ಉಪಯೋಗಿಸಬೇಕು. ಜಗತ್ತಿಗೆ ಮನುಷ್ಯನಿಂದ ಗಂಡಾಂತರ ವಿದೆಯಲ್ಲದೆ ಅಣುಬಾಂಬಿನಿಂದಲ್ಲ!

ಕಠಿಣತರ ಸಮಸ್ಯೆಯೊಂದಿಗೆ ಮನುಷ್ಯನಿಂದು ಕಾದಾಡಬೇಕಾಗಿದೆ. ಮನುಷ್ಯನು ಈಗ ಸ್ವಯಂ-ನಿಯಂತ್ರಣವನ್ನು ತಂದುಕೊಂಡು ತನ್ನ ದುಷ್ಟ ಪ್ರವೃತ್ತಿಗಳಿಗೆ ತಡೆಹಾಕಬೇಕು. ಸುಖ ಜೀವನವು, ಪರಿಪೂರ್ಣ ಜೀವ ನವು, ರೋಗ ರಹಿತವಾದ ಜೀವನವು ಈ ಪ್ರಪಂಚದಲ್ಲಿ ಸಾಧ್ಯವೆನಿಸ ಬೇಕಾದರೆ ಇನ್ನು ಯುದ್ಧಕ್ಕೆ ತೊಡಗಲಾರೆನೆಂದು ಮನುಷ್ಯನು ಶಪಥ ತೊಡಬೇಕು.

-- "ಅಣುಶಕ್ತಿಯ ವರದಾನ" ಎಂಬ ಗ್ರಂಥದಿಂದ

# ಅಧಿಕಾರ

ಮನುಷ್ಯ ಜೀವ ಇರುವೆಡೆಯಲ್ಲೆಲ್ಲ ಅಧಿಕಾರದ ಹಂಬಲ ಇರುವುದನ್ನು ನಾನು ಕಂಡಿದ್ದೇನೆ. ಯಜಮಾನನಾಗಬೇಕೆನ್ನುವ ಆಸೆ ಸೇವಕನ ಮನಸ್ಸಿನಲ್ಲಿ ಅವಿತುಕೊಂಡಿರುವುದನ್ನು ನಾನು ಬಲ್ಲೆ.

ಅಧಿಕಾರದ ಅಗತ್ಯ ಅಥವಾ ಬಯಕೆ ಮನುಷ್ಯನಲ್ಲಿದೆಯೆಂದು ನನ್ನ ಅಭಿಪ್ರಾಯವಲ್ಲ. ಅಧಿಕಾರ ಮೋಹವು ಭೂತವಾಗಿ ಜಗತ್ತನ್ನು ಹಿಡಿದುಕೊಂಡಿದೆ. ಮನುಷ್ಯನಿಗೆ ಅರಮನೆ, ಅನ್ನ, ಅರಿವೆ, ಸುಖ, ಆರೋಗ್ಯ-ಯಾವುದನ್ನು ಕೊಟ್ಟರೂ ಅವನ ಆಸೆ ಹಿಂಗಲಾರದು. ಆಗಲೂ ಅವನು ದುಃಖಿತನಾಗಿಯೇ ಉಳಿಯುತ್ತಾನೆ! ಅಧಿಕಾರಭೂತವು ಆತನಲ್ಲಿ ಆಶ್ರಯ ಕೇಳುತ್ತ ಕಾದು ನಿಂತಿರುತ್ತದೆ. ಅದರ ಬಯಕೆ ಸಫಲವಾದಾಗಲೇ ಆತನಿಗೆ ಶಾಂತಿ!

ಅಧಿಕಾರ ಮೋಹವು ಪರಿಣಾಮದಲ್ಲಿ ಭೂಕಂಪ ಸಮಾನವಾದುದು. ಜೀವನದಲ್ಲಿ ಪೊಳ್ಳಾದುದೆಲ್ಲವೂ ಅದರ ಪ್ರಭಾವದಿಂದ ಪುಡಿಗುಟ್ಟಿ ಹೋಗುವುದು. ತನಗೆ ಎದುರಾದುದನ್ನೆಲ್ಲ ಅದು ತುಳಿದು ಬೀಸಾಡಿ ಬಿಡುವುದು. ಅಧಿಕಾರ ಮೋಹಕ್ಕೆ ಮಣಿಯದ ಮನುಷ್ಯ ಯಾವನಿದ್ದಾನೆ?

ಅಧಿಕಾರ ದರ್ಶನ ಮಾತ್ರದಿಂದ ಮನುಷ್ಯನು ಬಾಗುತ್ತಾನೆ, ದೀರ್ಘದಂಡ ನಮಸ್ಕಾರ ಮಾಡುತ್ತಾನೆ, ದಿಂಡರಿಕೆ ಉರುಳುತ್ತಾನೆ, ಹಲ್ಲಿಯಂತೆ ನೆಲಕ್ಕೆ ಹತ್ತಿ ಹಾವಿಗೂ ಕಡೆಯಾಗಿ ಹರಿದಾಡುತ್ತಾನೆ. ಕೊನೆಗೆ ಆತನಲ್ಲಿರುವ ವಿದ್ವೇಷವು ಬಂಧನದಿಂದ ಬಿಚ್ಚಿದ ಹುಲಿಯಂತೆ ಸೇಡಿಗಾಗಿ ಹಾತೊರೆಯುತ್ತ ಪ್ರಕಟವಾಗುವುದು.

— ಜರ್ಮನ್ ತತ್ತ್ವಜ್ಞಾನಿ ನೀತ್ಸೆ

# ಪ್ರಪಂಚವೇ ಸ್ವರ್ಗ

ನೀನು ಇತರರನ್ನು ಆಳಬೇಕೆನ್ನುವೆಯಾ? ಹಾಗಾದರೆ ಮೊದಲು ವಿಧೇಯನಾಗಿರುವುದನ್ನು ಕಲಿ. ನಿನ್ನ ಒಳಧನಿಯನ್ನು ಕಿವಿಗೊಟ್ಟು ಕೇಳಿ ಅದರಂತೆ ವರ್ತಿಸು. ಇತರರನ್ನು ಆಳುವುದಕ್ಕೆ ಮುಂಚೆ ನಿನ್ನನ್ನೇ ನೀನು ಆಳುವುದನ್ನು ಅಭ್ಯಾಸಮಾಡು.

ಎಲ್ಲರೂ ನಿನ್ನನ್ನು ಪ್ರೀತಿಸಬೇಕೆಂಬ ಆಸೆ ನಿನ್ನಲ್ಲಿದ್ದರೆ ನೀನು ಯಾರನ್ನೂ ದ್ವೇಷಿಸಬೇಡ. ನಿನ್ನ ಹೃದಯವು ವಿಶ್ವಾಸದಿಂದ ತುಂಬಿ ತುಳುಕುತ್ತಿದ್ದರೆ ಇತರರೂ ನಿನ್ನನ್ನು ವಿಶ್ವಾಸದಿಂದ ಕಾಣುವರು. ಇನ್ನೊಬ್ಬರ ಪ್ರೀತಿಯನ್ನು ಗಳಿಸುವ ಗುಟ್ಟು ನಿನ್ನಲ್ಲಿಯೇ ಇದೆ. ಇತರರ ಬಗೆಗಿರುವ ದ್ವೇಷಭಾವನೆ ಅಳಿಯಲಿ. ನಿನ್ನ ವಿಷಯದಲ್ಲಿ ಅವರ ವಿಶ್ವಾಸ ತಾನಾಗಿಯೇ ಹೆಚ್ಚುವುದು.

ಈ ಪ್ರಪಂಚವನ್ನು ಬಿಟ್ಟು ಬೇರೆ ಸ್ವರ್ಗವಿಲ್ಲ. ನಿನ್ನ ಕಣ್ಣುಮುಂದಿನ ಮಣ್ಣುನೆಲವೇ ನಿನ್ನ ಸ್ವರ್ಗ. ಇಲ್ಲಿರುವ ಕೆಲರಾಕ್ಷಸರು ಅದನ್ನು ನರಕವಾಗಿ ಮಾರ್ಪಡಿಸಿದ್ದಾರೆ. ಎದ್ದೇಳು, ಎಚ್ಚರಗೊಳ್ಳು. ಪ್ರಪಂಚವನ್ನು ಪುನಃ ಪರಿವರ್ತಿಸು. ಅದನ್ನು ಸ್ವರ್ಗವನ್ನಾಗಿ ಮಾಡುವ ಶಕ್ತಿ ನಿನ್ನಲ್ಲಿಯೇ ಇದೆ. ನಿನ್ನ ಸಾಮರ್ಥ್ಯದ ಅರಿವು ನಿನ್ನಲ್ಲಿ ಬರಲಿ.

— ಮೋಹನಸಿಂಗ

# ಮನೆಯ ಮೇಲ್ವಿಚಾರಣೆ

ಸ್ವಾರ್ಥಕ್ಕಾಗಿ ಹೊಂಚುಹಾಕಿರುವ ಮನುಷ್ಯನು ತನ್ನ ಸಂಪನ್ನತೆಯನ್ನು ಸಿದ್ಧಪಡಿಸಲು ನಾನಾ ವಿಧವಾದ ನೆವಗಳನ್ನು ಮುಂದೆ ಮಾಡುತ್ತಾನೆ. ಅಂಥ ಮನುಷ್ಯನನ್ನು ಸದ್-ಗೃಹಸ್ಥನು ಸೇರುವುದಿಲ್ಲ.

ಮನೆಯ ಇಲ್ಲವೆ ರಾಷ್ಟ್ರದ ಮೇಲ್ವಿಚಾರಣೆ ನಡೆಸುತ್ತಿರುವ ಮನುಷ್ಯನು ಮನೆಯಲ್ಲಿ ಇಲ್ಲವೆ ದೇಶದಲ್ಲಿ ಕಡಿಮೆ ಜನರಿದ್ದಾರೆಂದು ಚಿಂತೆಪಡುವುದಿಲ್ಲವೆಂದು ನಾನು ಕೇಳಿದ್ದೇನೆ. ಸಂಪತ್ತಿನ ಅಸಮವಿನಿಯೋಗವನ್ನು ಕುರಿತು ಆತನು ಸದಾಕಾಲವೂ ಚಿಂತಿಸುತ್ತಾನೆ. ದಾರಿದ್ರ್ಯವನ್ನು ಕುರಿತೂ ಆತನು ಯೋಚನೆ ಮಾಡುವುದಿಲ್ಲ. ಸಾರ್ವತ್ರಿಕ ಅಸಂತುಷ್ಟಿಯ ಬಗ್ಗೆ ಮಾತ್ರ ಆತನಿಗೆ ಚಿಂತೆ ಇರುತ್ತದೆ. ಸಂಪತ್ತನ್ನು ಸರಿಸಮಾನವಾಗಿ ವಿನಿಯೋಗಮಾಡಿದರೆ ದೇಶದಲ್ಲಿ ದಾರಿದ್ರ್ಯ ಉಳಿಯಲಾರದು. ಜನತೆ ಒಕ್ಕಟ್ಟನಿಂದ ಐಕ್ಯವಾಗಿ ಉಳಿದರೆ ಎಷ್ಟೇ ಕಡಿಮೆ ಜನರಿದ್ದರೂ ಅದು ಸಣ್ಣ ರಾಷ್ಟ್ರವೆನಿಸಲಾರದು. ಅಸಂತುಷ್ಟಿ ಅಳಿದಾಗ, ಅಥವಾ ಜನತೆಯಲ್ಲಿ ಭದ್ರತೆಯ ದೃಷ್ಟಿ ಬಂದಾಗ, ರಾಷ್ಟ್ರವು ಸುರಕ್ಷಿತವಾಗಿ ಉಳಿಯುತ್ತದೆ.

ನೆರೆಹೊರೆಯ ಜನ ನಿನ್ನ ಕಡೆಗೆ ಲಕ್ಷ್ಯಕೊಡುವುದಿಲ್ಲವೆಂದು ನೀನೆನ್ನುವುದಾದರೆ ಅವರನ್ನು ಆಕರ್ಷಿಸುವಂಥ ಬೆಳವಣಿಗೆಯ ಕಡೆಗೆ ನೀನು ಮೊದಲು ಲಕ್ಷ್ಯಕೊಡು. ಹೊರಗಿನವರ ಆಕರ್ಷಣೆಯನ್ನು ಅಪೇಕ್ಷಿಸುವ ಮೊದಲು ನೀನು ನಿನ್ನ ಭದ್ರತೆಯನ್ನು ನೋಡಿಕೋ. ನೆವಗಳಿಗೆ ನಿನ್ನಲ್ಲಿ ನೆಲೆಕೊಡಬೇಡ.

— ಕನ್‌ಫ್ಯೂಷಿಯಸ್

# ಜೀವ-ಪ್ರವಾಹ

ಪ್ರತಿಯೊಬ್ಬನಿಗೂ ಅವನ ಆತ್ಮಾನೇ ಮುಖ್ಯ ಸ್ನೇಹಿತ. ಲಕ್ಷಾಂತರ ಮಂದಿಯನ್ನು ಮೋಸಪಡಿಸಬಹುದು. ಈ ಅಂತರಂಗ ಮಿತ್ರನನ್ನು ಮೋಸ ಪಡಿಸುವುದು ಮಾತ್ರ ಯಾರಿಗೂ ಸಾಧ್ಯವಿಲ್ಲ. ಆತನು ಗಟ್ಟಿಯಾಗಿ ಹೇಳ ದಿರಬಹುದು. ಆದರೂ ಆ ಮೆಲುದನಿಯನ್ನು ಕೇಳಿ ತಿಳಿಯುಂಥ ಶಕ್ತಿಯನ್ನು ಸಕಲರೂ ಬೆಳಸಿಕೊಳ್ಳಬೇಕು. ಒಳದನಿಗೆ ಲಕ್ಷ್ಯಕೊಡದೆ ವ್ಯತಿರಿಕ್ತ ವಾಗಿ ನಡೆದುಕೊಂಡವರು ದುಃಖಕ್ಕೆ ಗುರಿಯಾಗಿದ್ದಾರೆ.

ಜೀವನಕ್ಕೆ ಎರಡು ಮುಖಗಳುಂಟು. ಒಂದು ಕಡೆ ಕತ್ತಲೆಯ ಕಪ್ಪು. ಇನ್ನೊಂದು ಕಡೆ ಬೆಳಕಿನ ಹೊಳಪು. ಕತ್ತಲು ಕವಿಯಿತೆಂದು ಕುಗ್ಗ ಲಾರದು. ಬೆಳಕು ಹರಿಯಿತೆಂದು ಹಿಗ್ಗಬಾರದು. ಮನುಷ್ಯನಾದವನು ಎರಡು ಅನುಭವಗಳನ್ನೂ ಸಮದೃಷ್ಟಿಯಿಂದ ಕಾಣಬೇಕು.

ಕಷ್ಟಕಾಲದಲ್ಲಿ ಕಂಗೆಡದೆ ಶಾಂತವಾಗಿ ಉಳಿದವನೇ ಜೀವನದಲ್ಲಿ ಜಯಶಾಲಿಯಾಗಿದ್ದಾನೆ. ಎಂಥ ಪ್ರಸಂಗದಲ್ಲಿಯೂ ಮನುಷ್ಯನು ಮತಿಗೆಡ ಬಾರದು. ಜೀವನಕ್ಕೆ ದೊಡ್ಡವರು ಮಹತ್ವದ ಬೆಲೆ ಹಚ್ಚುವುದಿಲ್ಲ. "ನನ್ನಿಂದಲೇ ಈ ಪ್ರಪಂಚ" ಎಂದು ಹೇಳತಕ್ಕವನು ಭೂಮಿಯ ಮೇಲೆ ಯಾವನಿದ್ದಾನೆ? ಅವನು ಅಥವಾ ಇವನು ಇಲ್ಲವೆಂದು ಪ್ರಪಂಚದ ಜೀವ ಪ್ರವಾಹ ನಿಲ್ಲುವುದಿಲ್ಲ. ಇದನ್ನು ಪ್ರತಿಮನುಷ್ಯನೂ ನೆನಪಿನಲ್ಲಿಟ್ಟುಕೊಂಡು ನಡೆಯಬೇಕು. ಈ ಪ್ರಪಂಚಕ್ಕೆ ಅಗತ್ಯನಾದವನು ಯಾವನೊಬ್ಬನೂ ಇಲ್ಲ.

— ಮೋಹನಸಿಂಗ

# ನಡು-ಹಾದಿ

ಸಂಕಷ್ಟಪಡುವುದಾಗಲಿ ಸೊರಗುವುದಾಗಲಿ ತಪಸ್ಸಾಧನೆಯೆನಿಸಲಾರದು. ಸಾಧಕನ ಸೊರಗಿದ ದೇಹದಂತೆ ಆತನ ಮನಸ್ಸೂ ಸೊರಗಿರುತ್ತದೆ. ರೋಗಗ್ರಸ್ತವಾದ ಮನಸ್ಸು ಯಾವುದನ್ನೂ ಗ್ರಹಣಮಾಡಿಕೊಳ್ಳಲಾರದು. ಕಾಯಕಷ್ಟದಿಂದ ಲೌಕಿಕ ಜ್ಞಾನವೂ ಲಭಿಸುವುದಿಲ್ಲ. ದುರ್ಬಲ ಪ್ರಕೃತಿಯಿಂದ ಇಂದ್ರಿಯ ಜಯ ಸಾಧ್ಯವೇ ?

ಹಣತೆಯಲ್ಲಿ ಎಣ್ಣೆಗೆ ಬದಲಾಗಿ ನೀರನ್ನು ಸುರಿಯತಕ್ಕವನು ಕತ್ತಲೆಯನ್ನು ಹಿಮ್ಮೆಟ್ಟಿಸಲಾರ. ಕೊಳೆತ ಕಟ್ಟಿಗೆಯಿಂದ ಬೆಂಕಿಯನ್ನು ಹೊತ್ತಿಸಬೇಕೆನ್ನುವವನು ತನ್ನ ಸಾಹಸದಲ್ಲಿ ಸೋಲುವುದು ನಿಶ್ಚಿತ. ಐಹಿಕ ಸುಖಭೋಗಗಳ ಮೋಹವನ್ನು ತೊರೆಯದೆ, ಕಾಮಪಿಪಾಸೆಯನ್ನು ಹರಿದೊಗೆಯದೆ ಆತ್ಮವನ್ನು ಜಯಿಸುತ್ತೇನೆನ್ನುವ ಮಾತಿಗೆ ಯಾವ ಅರ್ಥವಿದೆ? ಅನಾಚಾರದ ಬದುಕನ್ನು ಸಾಗಿಸುತ್ತ ಮನಸ್ಸನ್ನು ಅಂಕಿತದಲ್ಲಿ ಇಟ್ಟುಕೊಂಡವರು ಜಗತ್ತಿನಲ್ಲಿ ಯಾರಾದರೂ ಇದ್ದಾರೆಯೇ?

ಸ್ವಂತದ ಪ್ರಜ್ಞೆಯನ್ನು ಯಾವನು ಬಿಟ್ಟಿರುವನೋ ಅವನ ಬಳಿಯಲ್ಲಿ ಮೋಹಗಳೊಂದೂ ಸುಳಿಯಲಾರವು. ಅವನು ಈ ಲೋಕದ ಇಲ್ಲವೆ ಪರಲೋಕದ ಯಾವ ಸುಖವನ್ನೂ ಬಯಸುವುದಿಲ್ಲ. ಬದುಕಿನ ಸ್ವಾಭಾವಿಕ ಆವಶ್ಯಕತೆಗಳು ಆತನನ್ನು ಅಡ್ಡಹಾದಿಗೆ ಕರೆದೊಯ್ಯಲಾರವು.

ಇಂದ್ರಿಯ ವ್ಯಾಮೋಹದಲ್ಲಿ ವಿನಾಶವಿದೆ. ಅದಕ್ಕೆ ಆಳಾದವನು ಅವನತಿ ಹೊಂದುತ್ತಾನೆ. ಬದುಕಿನ “ ಬೇಕು ” ಗಳನ್ನು ಪೂರೈಕೆಮಾಡಿಕೊಳ್ಳುವುದು ಮಾತ್ರ ಪಾಪಾಚರಣೆಯಲ್ಲ. ದೇಹವನ್ನು ಆರೋಗ್ಯವಾಗಿ ಕಾಪಾಡಿಕೊಂಡು ಬರುವುದು ಮನುಷ್ಯಪಾಲಿನ ಕರ್ತವ್ಯವಾಗಿದೆ. ಸರಿಯಾದ ದೇಹಬಲ ಇಲ್ಲದೇಹೋದರೆ ಮನಸ್ಸನ್ನು ಬಲವಾಗಿಯೂ ನಿರ್ಮಲವಾಗಿಯೂ ಇಟ್ಟು ಜ್ಞಾನದೀಪವನ್ನು ಹೊತ್ತಿಸುವುದು ನಮಗೆ ಸಾಧ್ಯವಾಗಲಾರದು. ಕಮಲಪುಷ್ಪದ ಸುತ್ತಲೂ ನೀರು ಪಸರಿಸಿರುತ್ತದೆ. ಆದರೂ ಅದು ಹೂವಿನ ಯಾವ ಎಸಳನ್ನೂ ಒದ್ದೆಗೊಳಿಸುವುದಿಲ್ಲ.

— ಬುದ್ಧ

# ಇಂದೇ ಆಗಲಿ

ನಿನ್ನ ಸ್ವಭಾವದಲ್ಲಿ ಬರಬೇಕಾದ ಬದಲಾವಣೆಯನ್ನು ಮೊದಲು ಬರಮಾಡಿಕೋ. ಇಂದಿನ ಕೆಲಸವನ್ನು ಬದಿಗಿರಿಸಿ ನೀನು ಎಂದೂ ನಾಳೆ ಗೆನಬೇಡ. ನಿನ್ನನ್ನು ಸರಿಪಡಿಸಿಕೊಳ್ಳುವ ಪ್ರಯತ್ನ ನಿಲ್ಲದೇ ಸಾಗಲಿ. "ನನ್ನ ಬಗ್ಗೆ ನಾನು ನಾಳೆ ಎಚ್ಚರಪಟ್ಟುಕೊಳ್ಳುತ್ತೇನೆ," ಎಂದು ನೀನು ಅನ್ನುವುದಾದರೆ, "ಈ ದಿವಸ ಅಂಜುಬುರುಕನಾಗಿರುತ್ತೇನೆ, ಕ್ಷುದ್ರನಾಗಿ ರುತ್ತೇನೆ, ನಾಚಿಕೆಗೇಡಿಯಾಗಿರುತ್ತೇನೆ" ಎಂದು ಹೇಳಿದಂತೆಯೇ ಸರಿ.

ಈ ಬಗೆಯ ಮನೋವೃತ್ತಿಗೆ ನಿನ್ನಲ್ಲಿ ಇಂಬು ದೊರೆಯುವುದಾದರೆ ದುಷ್ಟತನಕ್ಕೆ ನಿನ್ನಲ್ಲಿ ನೀನೇ ಆಶ್ರಯ ಕಲ್ಪಿಸಿಕೊಟ್ಟಂತಾಗುವುದು. ನಿನ್ನಲ್ಲಿ ಪರಿವರ್ತನೆ ಉಂಟಾಗುವುದು ಒಳ್ಳೆಯದೆನಿಸಿದರೆ ಅದನ್ನು ನೀನು ಈಕ್ಷಣವೇ ತಂದುಕೊಳ್ಳಬೇಕು. ಮಾಡುವ ಪ್ರತಿಯೊಂದು ಕಾರ್ಯವನ್ನೂ ನೀನು ಕಣ್ಣು ಮನಸ್ಸು ಹಾಗೂ ಆತ್ಮಸಾಕ್ಷಿಯಾಗಿ ಮಾಡಿದರೆ ನಿನಗೆ ಅದರಲ್ಲಿ ಅನಿರ್ವಚನೀಯ ಸುಖ ಲಭಿಸುವುದು.

ನಾಳೆ ಉಪಯುಕ್ತವಾಗಬಲ್ಲ ಕೆಲಸ ಇಂದು ಅದಕ್ಕಿಂತಲೂ ಹೆಚ್ಚು ಉಪಯುಕ್ತವಾಗುವುದು. ಇಂದಿನ ಕೆಲಸವನ್ನು ನೀನು ಈ ದಿನವೇ ಮಾಡಿ ಮುಗಿಸಿದರೆ ನಾಳೆ ಇದಕ್ಕೂ ಹೆಚ್ಚಿನ ಕೆಲಸ ಮಾಡಲಿಕ್ಕೆ ನಿನಗೆ ಹೆಚ್ಚಿನ ಬಲ ಬರುತ್ತದೆ. ನಾಳೆ ಎನ್ನುವ ನೆವ ನಿನ್ನಲ್ಲಿ ಬರಬಾರದು. ನಾಳೆ ಎಂದು ಹೇಳತಕ್ಕವನು ನಾಡದು ಎಂದು ಹೇಳಲಾರನೇಕೆ ?

— ಎಪಿಕ್ಟಿಟಸ್

# ಮುದುಕನ ಮದುವೆ

ಸಣ್ಣ ಹೆಣ್ಣನ್ನು ಮದುವೆಯಾಗುವ ಮುದುಕನ ಮನಸ್ಸು ಬಹು ಬೇಗನೆ ಅತ್ಯಲ್ಪಕಾರಣಗಳಿಂದ ಸಂಶಯಗ್ರಸ್ತವಾಗುತ್ತದೆ. ಸಂಶಯವು ಒಮ್ಮೆ ಮುದಿ ಮೆದುಳನ್ನು ಪ್ರವೇಶಿಸಿತೆಂದರೆ ಒಣಗಿದ ಮರದ ಬುಡಕ್ಕೆ ಗೆದ್ದಲು ಹಿಡಿದಂತಾಗುತ್ತದೆ. ಏನು ಕಂಡರೂ ಏನು ಕೇಳಿದರೂ ಎಲ್ಲವೂ ಸಂಶಯಭೂತವನ್ನು ಮತ್ತೂ ಹಿರಿದಾಗಿ ಮಾಡುವ ಸಾಕ್ಷಿಗಳಾಗಿ ಪರಿಣಮಿಸುತ್ತವೆ.

ಮೊದಲು ಸಾಧಾರಣ ಸರಳ ಮುಗ್ಧವಾಗಿ ತೋರುತ್ತಿದ್ದ ವಿಷಯಗಳು ತರುವಾಯ ಫಿತೂರಿಯ ಪಿಶಾಚಿಗಳಾಗಿ ತೋರುತ್ತವೆ. ಸಂಶಯದಿಂದ ಮಾತ್ಸರ್ಯ, ದ್ವೇಷ, ಕ್ರೋಧಗಳು ಹೊಮ್ಮಿ ಹೃದಯವು ಹಿಂಸಾಭಿಮುಖವಾಗುತ್ತದೆ. ಕಾನೂನಿನ ಪ್ರಕಾರವೂ ಸಮಾಜದ ಆಚಾರದ ಪ್ರಕಾರವೂ ಸಣ್ಣ ಹೆಣ್ಣನ್ನು ಮದುವೆಯಾಗುವ ಮುದುಕನು ಅಪರಾಧಿಯೂ ಅಲ್ಲ, ಪಾಪಿಯೂ ಅಲ್ಲ. ಆದರೂ ಪ್ರಕೃತಿಯ ತೀರ್ಪು ಬೇರೆಯಾಗಿರುತ್ತದೆ. ಮುದುಕನ ಮನಸ್ಸಿನಲ್ಲಿಯೇ ಅದು ವ್ಯಕ್ತವಾಗುತ್ತದೆ. ತಾನು ದುಡ್ಡು ಖರ್ಚುಮಾಡಿ ಬಹುಜನ ಬಂಧುಗಳ ಸಮ್ಮುಖದಲ್ಲಿ ಶಾಸ್ತ್ರರೀತಿಯಾಗಿ ದೇವ ದೇವತೆಗಳ ಸಾಕ್ಷಿಯಲ್ಲಿ ಕೈಹಿಡಿದ ಬಾಲ ವಧುವನ್ನು ಕಾಮಲಾಲಸೆ ಪ್ರೇರಿಸಿದಂತೆ ಉಪಭೋಗಿಸಬಹುದಾದರೂ, ಉಪಯೋಗಿಸುವವನಾದರೂ, ಅಂತರಂಗದಲ್ಲಿ ತಾನು ಅಪರಾಧಿ ಎಂದು ಆತನು ತಿಳಿಯುತ್ತಾನೆ. ಅದಕ್ಕೆ ತಕ್ಕ ಶಿಕ್ಷೆಯೂ ಅಂತರಂಗದಲ್ಲಿಯೇ ಪ್ರಾರಂಭವಾಗುತ್ತದೆ.

ಎಳೆಯದೆಂದಿಗೂ ಹಳೆಯದನ್ನು ಒಲಿಯಲಾರದು. ಬಾಲ್ಯ–ವೃದ್ಧಾಪ್ಯಗಳಿಗೆ ಗೌರವದ ಸಂಬಂಧವಿರಬಲ್ಲದೇ ಹೊರತು ಪ್ರೇಮ ಸಂಬಂಧವಿರಲಾರದು.

— ಕೆ. ವಿ. ಪುಟ್ಟಪ್ಪ

# ಆದರ್ಶ

ಸಾಯುವುದು ಸುಲಭವಿರುವಂತೆ ಆದರ್ಶಕ್ಕಾಗಿ ಬದುಕುವುದು ಮಾತ್ರ ಸುಲಭವಲ್ಲ. ಮಾನವತೆಯ ಸೇವೆಯಲ್ಲಿಯೇ ಜೀವನದ ಸಾಫಲ್ಯವಿದೆ ಯೆಂದು ತಿಳಿದವರು ನಮ್ಮಲ್ಲಿ ನಿಜವಾಗಿಯೂ ಎಷ್ಟು ಜನರಿದ್ದಾರೆ?

ಜೀವನದ ಸಂಗ್ರಾಮದಲ್ಲಿ ನಾವು ಸ್ವಾರ್ಥವನ್ನು ಬಿಟ್ಟು ಮೇಲೇಳ ಬೇಕು. ನಮ್ಮ ಪಾಲಿನ ಸೇವೆ ಜಗತ್ತಿಗೆ ಸಲ್ಲಬೇಕಾಗಿದೆ. ಸೇವೆ ಮಾಡುವು ದರಲ್ಲಿಯೇ ನಾವು ಸಂತೋಷವನ್ನು ಕಂಡುಕೊಳ್ಳಬೇಕು. ಮಾಡುವ ಕೆಲಸದ ಫಲಭೋಗದ ಮೇಲೆ ಬದುಕುವುದು ಜೀವನವಲ್ಲ. ಹಿಡಿದ ಕೆಲ ಸವನ್ನು ಚೊಕ್ಕ ಚಿನ್ನವನ್ನಾಗಿ ಮಾಡಬೇಕೆಂಬುದೇ ನಮ್ಮ ಉದ್ದೇಶ ವಾಗಬೇಕು.

ಸಂತತವೂ ಆದರ್ಶಕ್ಕೇ ಅಂಟಿಕೊಂಡರೆ ಜಯಾಪಜಯಗಳ ಭಾವನೆ ಯಿಂದ ನಾವು ವಿಮುಖರಾಗಲಾರೆವು. ಸ್ವಂತಕ್ಕೆ ಹತ್ತುವಂಥ ದುರ್ದೆಶೆ ಗಳು ಆಗ ನಮಗೆ ಮುಖ್ಯವೆಂದು ತೋರುವುದಿಲ್ಲ. ಉದಾತ್ತವಾದುದರಲ್ಲಿ ನಾವು ಆಶ್ರಯವನ್ನೂ ಅಭಯವನ್ನೂ ಕಂಡುಕೊಳ್ಳುತ್ತೇವೆ.

— ಸ್ವಾಮಿ ಪರಮಾನಂದ

# ಬದುಕುವ ಬಗೆ

ಸರಿಯಾಗಿ ಬದುಕುವುದನ್ನು ಕಲಿತುಕೊಳ್ಳುವುದೇ ಜೀವನದ ಗುರಿಯಾಗಬೇಕು. ಆ ಉದ್ದೇಶ ಸಫಲವಾಗಲೆಂದೇ ಮನುಷ್ಯ ಜೀವ ನಿರ್ಮಾಣಗೊಂಡಿದೆ.

ಮನುಷ್ಯನು ಮುಕ್ತಹಸ್ತದಿಂದ ಕೊಡಬೇಕು. ಒಂದು ಕೊಟ್ಟವನು ಹತ್ತು ಪಡೆದುಕೊಳ್ಳುತ್ತಾನೆ. ಕೊಡುವುದರಲ್ಲಿಯೇ ಜೀವಿತದ ಗುಟ್ಟು ಹುದುಗಿಕೊಂಡಿದೆ. ಶಾಶ್ವತವಾದುದನ್ನು ಸಂಪಾದಿಸಬೇಕೆನ್ನುವ ಮನುಷ್ಯನು ಕ್ಷಣಿಕವಾದುದನ್ನು ಬಿಡಬೇಕು. ಸುಖಕ್ಕೆ ಅದೇ ಹೆದ್ದಾರಿಯಾಗಿದೆ. ದೇವ ದರ್ಶನವೂ ಅದರಿಂದಲೇ ಲಭಿಸುತ್ತದೆ.

ಪಡೆಯುವ ಯೋಗ್ಯತೆ ನಮ್ಮಲ್ಲಿ ಬರಬೇಕಾದರೆ ನಾವು ಮೊದಲು ಕೊಡುವುದನ್ನು ಕಲಿಯಬೇಕು. ಕೊಡುವುದು ನಿಸರ್ಗದ ನಿಯಮವಾಗಿದೆ. ಅದನ್ನು ಜಗತ್ತಿನಲ್ಲಿ ಬಿಂಬಿಸಲೆಂದೇ ಕ್ರಿಸ್ತನು ಜೀವಾರ್ಪಣ ಮಾಡಿದನು. ವಿಶ್ವದ ಈ ಶಾಸನವನ್ನು "ತ್ಯಾಗ" ವೆನ್ನುವ ಒಂದೇ ಶಬ್ದದಲ್ಲಿ ಹೇಳಬಹುದು.

ಜಗತ್ತು ಬೇಡುತ್ತಿರುವುದು ಮನುಷ್ಯನ ಬಲಿಯನ್ನಲ್ಲ, ಮನುಷ್ಯನಲ್ಲಿರುವ ಸ್ವಾರ್ಥದ ಬಲಿಯನ್ನು!

— ಎಡ್ವರ್ಡ ಸ್ಕಾಟ್

# ಸುಧಾರಕ

ನೀನು ಸುಧಾರಕನೆನಿಸಬೇಕಾದರೆ ನಿನ್ನಲ್ಲಿ ಮೂರು ಗುಣಗಳು ಮುಖ್ಯವಾಗಿ ಬೇಕು. ಮೊದಲನೆಯದಾಗಿ ಸುಧಾರಣೆಯ ಕಳಕಳಿ ನಿನ್ನ ಮನಸ್ಸಿನಲ್ಲಿ ಮೂಡಬೇಕು. ನಿನ್ನ ಸೋದರರ ಬಗ್ಗೆ ನಿನಗೆ ಮರುಕವಿದೆಯೇ? ಜಗತ್ತಿನಲ್ಲಿ ದುಃಖ ಅಜ್ಞಾನ ಮೌಢ್ಯ ತುಂಬಿದೆಯೆಂದು ನಿನಗೆ ನಿಜ ವಾಗಿಯೂ ಮನವರಿಕೆಯಾಗಿದೆಯೇ ? ಮನುಷ್ಯರೆಲ್ಲ ಬಂಧುಗಳೆಂಬ ಭಾವನೆ ನಿನ್ನ ಮನಸ್ಸಿನಲ್ಲಿ ತುಂಬಿಕೊಂಡಿದೆಯೇ ? ನಿನ್ನ ದೇಹದ ರಕ್ತದ ಪ್ರತಿ ಕಣದಲ್ಲಿಯೂ ಆ ವಿಚಾರ ಹರಿದಾಡುತ್ತಿದೆಯೇ ? ಆದರ್ಶವೇ ನಿನ್ನ ವ್ಯಕ್ತಿ ತ್ವದ ತಳಹದಿಯಾಗಿದೆಯೇ ?

ಅನುಕಂಪದ ಭಾವನೆ ನಿನ್ನಲ್ಲಿ ಆಳವಾಗಿ ಬೇರೂರಿದ್ದರೆ ಪರಿಹಾರ ವನ್ನು ಕಂಡುಹಿಡಿಯಲು ನೀನು ಪ್ರಯತ್ನಕ್ಕೆ ತೊಡಗು. ಹಳೆಯ ವಿಚಾರ ಗಳಿಗೆ ಮೌಢ್ಯತೆಯ ಗೆದ್ದಲು ಹಿಡಿದಿರಬಹುದು. ಆದರೆ ಆ ಪುರಾತನ ಹುತ್ತದಲ್ಲಿಯೇ ಹೊನ್ನಿನ ಕಣಗಳಿವೆಯೆಂಬುದನ್ನು ನೀನು ಮರೆಯಬೇಡ. ಹೊನ್ನನ್ನು ಶೋಧಿಸಿ ತೆಗೆಯುವಾಗ ಮಣ್ಣು ಬರದಂತೆ ನೋಡಿಕೊಳ್ಳು ವುದು ನಿನ್ನ ಕೆಲಸ.

ನೀನು ಇಷ್ಟೆಲ್ಲವನ್ನೂ ಮಾಡುತ್ತಿರುವುದು ಯಾವ ಉದ್ದೇಶ ಸಾಧನೆ ಗಾಗಿ ? ಕೀರ್ತಿ ಐಶ್ವರ್ಯ ಅಧಿಕಾರಗಳ ದುರಾಸೆಯಿಂದ ಸಾಗಿಲ್ಲವೆಂದು ನೀನು ಹೇಳಬಲ್ಲೆಯಾ ? ಇಡೀ ಜಗತ್ತೇ ಒಂದಾಗಿ ನಿನ್ನನ್ನು ತುಳಿಯಬೇಕೆಂದು ಬಂದರೂ ನೀನು ನಿನ್ನ ಆದರ್ಶಕ್ಕೇ ಅಂಟಿಕೊಂಡು ಭದ್ರವಾಗಿ ನಿಲ್ಲುವೆಯಾ? ನಿನ್ನ ಜೀವ ಕೊನೆಗೊಳ್ಳುವುದು ಖಂಡಿತವೆನಿಸಿದಾಗಲೂ ನೀನು ಮಾಡ ತಕ್ಕ ಕಾರ್ಯವನ್ನು ಮಾಡಬಲ್ಲೆಯಾ ?

ಹಾಗಾದರೆ ಮಾತ್ರ ನೀನು ಗುರು, ಶಿಕ್ಷಕ, ಸುಧಾರಕ. ಮಾನವ–ಕೋಟಿಗೆ ನಿನ್ನ ಜೀವಿತವು ಒಂದು ಶ್ರೇಷ್ಠ ವರಪ್ರಸಾದ.

— ಸ್ವಾಮಿ ವಿವೇಕಾನಂದ

## ವಿಚಾರದಂತೆ ವ್ಯಕ್ತಿ

ತಮ್ಮ ದೈನ್ಯತೆಯನ್ನು ವ್ಯಕ್ತಪಡಿಸಲು ಅನೇಕ ಜನರು ಧೂಳಿನಲ್ಲಿ ಹೊರಳುವ ಒಂದು ಮಣ್ಣುಹುಳ ತಾವೆಂದು ಹೇಳಿಕೊಳ್ಳುವುದುಂಟು. ಹುಳದ ವಿಚಾರ ಬೆಳೆಬೆಳೆದು ಕೊನೆಗೆ ತಾವು ನಿಜವಾಗಿಯೂ ಹುಳವೆನ್ನುವ ಭಾವನೆ ಅವರಲ್ಲಿ ಧೃಡಗೊಳ್ಳುತ್ತದೆ. ಕಾಲಕ್ರಮದಲ್ಲಿ ಅವರು ಹುಳದಂತೆ ದುರ್ಬಲರೂ ಕ್ಷುದ್ರರೂ ಕ್ಷೀಣಪ್ರಕೃತಿಯವರೂ ಆಗುತ್ತಾರೆ.

ಕ್ಷುದ್ರತೆಯ ಭಾವನೆ ಯಾರ ಮನಸ್ಸಿನಲ್ಲಿಯೂ ಸುಳಿಯಬಾರದು. ವಿವಂಚನೆಗೊಂಡವರು ವಿಜಯಶಾಲಿಗಳಾದ ಉದಾಹರಣೆ ಜಗತ್ತಿನಲ್ಲಿ ಎಲ್ಲಿಯೂ ಇಲ್ಲ. ಪ್ರಗತಿಪಥದಲ್ಲಿ ವಿವಂಚನೆಯು ಒಂದು ದೊಡ್ಡ ಬಂಡೆಗಲ್ಲು. ಮನುಷ್ಯನು ಯಾವ ರೀತಿ ವಿಚಾರಮಾಡುತ್ತಾನೆಯೋ ಆ ರೀತಿಯಾಗಿ ಆತನು ರೂಪಗೊಳ್ಳುತ್ತಾನೆ. ಕೃತಿಯ ಮೂಲವು ವಿಚಾರವೇ ಅಲ್ಲವೇನು ?

— ಶ್ರೀ ರಾಮಕೃಷ್ಣ

# ಜೀವನ ಸಂಗ್ರಾಮ

ಈ ಜಗತ್ತು ನಿರ್ಮಾಣವಾಗಿರುವುದು ಅಂಜುಬುರುಕರಿಗಲ್ಲ. ಜೀವನದಿಂದ ಓಡುವ ಹವಣಿಕೆಯನ್ನು ನಿನ್ನ ಮನಸ್ಸಿನಲ್ಲಿ ಎಂದೂ ತರಬೇಡ. ಜಯಾಪಜಯಗಳ ಬಗ್ಗೆ ಚಿಂತಿಸುವುದು ನಿನ್ನ ಕೆಲಸವಲ್ಲ. ನಿನ್ನ ಮನಸ್ಸಿನ ನಿಃಸ್ವಾರ್ಥ ಭಾವನೆಗಳೊಂದಿಗೆ ಹೊಂದಿಕೊಂಡು ನೀನು ಸುಮ್ಮನೆ ಕೆಲಸಕ್ಕೆ ತೊಡಗು. ಜಯಿಸುವುದಕ್ಕೆಂದು ಜನ್ಮವೆತ್ತಿ ಬಂದ ಮನಸ್ಸು ಜಯಿಸುವುದಕ್ಕೆ ಬೇಕಾದ ನಿರ್ಧಾರವನ್ನು ತನ್ನಲ್ಲಿ ತಾನೇ ಉಂಟುಮಾಡಿಕೊಳ್ಳುವುದು.

ಜೀವನ ಸಂಗ್ರಾಮದ ನಡುಮಧ್ಯದಲ್ಲಿ ನಿಂತು ನೀನು ಬದುಕನ್ನು ಸಾಗಿಸು. ಗವಿಯಲ್ಲಿ ಕುಳಿತಾಗ ಇಲ್ಲವೆ ನಿದ್ದೆಹತ್ತಿ ಮಲಗಿದಾಗ ಯಾವನಾದರೂ ಶಾಂತವಾಗಿ ಇರಬಹುದು. ಆದರೆ ಕಾಲಚಕ್ರದ ತಿರುಗಣಿ ನಡುವಿನಲ್ಲಿ ಕಾಲು ತಪ್ಪದಂತೆ ನಿಂತು, ನೀನು ಘರ್ಷಣೆಯ ಈ ಹುಚ್ಚು ಹೊಳೆಯಲ್ಲಿ ಈಸಿ ಹೋಗಿ ಜೀವನದ ಮಧ್ಯಬಿಂದುವನ್ನು ಹಿಡಿದುಕೊಳ್ಳಬೇಕು. ಮಧ್ಯಬಿಂದು ನಿನ್ನ ಕೈವಶವಾಯಿತೆಂದರೆ ನಿನ್ನನ್ನು ಅಲುಗಿಸುವುದು ಯಾರಿಗೂ ಸಾಧ್ಯವಾಗಲಾರದು.

ಜೀವನದ ಒಂದು ತುದಿ ಜ್ಞಾನ, ಇನ್ನೊಂದು ತುದಿ ಸೌಖ್ಯ. ಜ್ಞಾನ ಹಾಗೂ ಸೌಖ್ಯದಿಂದ ಸ್ವಾತಂತ್ರ್ಯಕ್ಕೆ ದಾರಿ ಕಲ್ಪಿತವಾಗುತ್ತದೆ. ಎಲ್ಲರೂ ಸ್ವತಂತ್ರರಾಗುವವರೆಗೆ ಯಾವನೂ ಸ್ವತಂತ್ರವಾಗಲಾರನು. ಎಲ್ಲರೂ ಸುಖಿಗಳಾಗದೆ ಯಾವನೂ ಸುಖವಾಗಿರಲಾರನು. ಯಾವನು ತನ್ನಾತ್ಮದಲ್ಲಿ ವಿಶ್ವಾತ್ಮವನ್ನೂ, ವಿಶ್ವಾತ್ಮದಲ್ಲಿ ತನ್ನಾತ್ಮವನ್ನೂ ಕಂಡುಕೊಳ್ಳಬಲ್ಲನೋ ಅವನೇ ನಿಜವಾದ ಯೋಗಿ.

— ಸ್ವಾಮಿ ವಿವೇಕಾನಂದ

# ನಂಬಿಗೆಯ ಬಲ

ನಂಬಿಗೆಯಿಂದಲೇ ಅನೇಕ ರೋಗಿಗಳು ಗುಣಹೊಂದಿದ್ದಾರೆ. ರೋಗವೇ ಇಲ್ಲವೆನ್ನುವ ನಂಬಿಗೆಯನ್ನು ವೈದ್ಯರು ಅವರಲ್ಲಿ ಧೃಡಗೊಳಿಸುವುದೇ ಇದಕ್ಕೆ ಕಾರಣವಾಗಿದೆ. "ನಾನು ಸರಿಯಾಗಿದ್ದೇನೆ," ಎಂದು ಅವರು ಉಚ್ಚರಿಸುತ್ತಿದ್ದಂತೆ ಅವರ ರೋಗ ಹರಿದುಹೋಗುತ್ತದೆ. ನೈತಿಕ ದೌರ್ಬಲ್ಯ ನಿನ್ನಲ್ಲಿದೆಯೆಂದು ತಿಳಿದುಕೊಂಡರೆ ಕೆಲ ಕಾಲಾನಂತರದಲ್ಲಿ ನೀನು ನಿಜವಾಗಿಯೂ ಹಾಗೆಯೇ ಆಗುವೆ. ನಿನ್ನಲ್ಲಿ ಅಪಾರ ಶಕ್ತಿ ಇದೆಯೆಂದು ನಂಬಿಕೆ ತಂದುಕೊಂಡು ನೀನು ಮುಂದೆ ಸಾಗು. ಕೊನೆಯಲ್ಲಿ ನೀನು ಶಕ್ತಿವಂತನಾಗುವುದು ನಿಶ್ಚಿತ.

ಒಂದು ಕಲ್ಲು ಅಸಂಖ್ಯ ವರ್ಷಗಳವರೆಗೆ ನೀರಿನಲ್ಲಿ ಬಿದ್ದಿದ್ದರೂ ನೀರು ಅದರೊಳಗೆ ನುಗ್ಗಲಾರದು. ಆದರೆ ನೀರಿನ ಸ್ಪರ್ಶ ಮಾತ್ರದಿಂದ ಮಣ್ಣು ಕರಗಿ ಹೋಗುವುದು. ಎದೆ ಗಟ್ಟಿಯಾಗಿದ್ದವನು ಜೀವನದ ನೂಕುನುಗ್ಗಿನಲ್ಲಿ ಗಾಸಿಗೊಳ್ಳುವುದಿಲ್ಲ. ದುರ್ಬಲ ಪ್ರಕೃತಿಯವನು ಅತ್ಯಲ್ಪ ಕಾರಣಕ್ಕಾಗಿಯೂ ಅಳುಕುತ್ತಾನೆ, ಅಲುಗಾಡುತ್ತಾನೆ.

ಅಗ್ನಿಶಿಲೆಯು ಯುಗ ಯುಗಗಳವರೆಗೆ ನೀರಿನಲ್ಲಿ ಉಳಿದರೂ ಅದು ತನ್ನಲ್ಲಿ ಹುದುಗಿರುವ ಬೆಂಕಿಯನ್ನು ಕಳೆದುಕೊಳ್ಳುವುದಿಲ್ಲ. ಕಬ್ಬಿಣದ ಸುತ್ತಿಗೆಯಿಂದ ಅದನ್ನು ಬೇಕಾದಲ್ಲಿ ಬಡಿದರೂ ಪ್ರಕಾಶಮಾನವಾದ ಕಿಡಿ ಅದರಿಂದ ಹಾರಿಬರುತ್ತದೆ. ನಿಜವಾದ ಸಾಧಕನಲ್ಲಿ ಅಂಥ ಪ್ರಕಾಶ ತುಂಬಿರುತ್ತದೆ. ಜಗತ್ತಿನ ಕೊಳೆ-ಕಶ್ಮಲಗಳು ಆತನನ್ನು ಸುತ್ತುವರಿದಾಗಲೂ ಅವನು ತನ್ನ ನಂಬಿಗೆಯನ್ನಾಗಲಿ, ಪ್ರೀತಿಯನ್ನಾಗಲಿ ಕಳೆದುಕೊಳ್ಳುವುದಿಲ್ಲ. ಆ ಸರ್ವಶಕ್ತನ ನಾಮಸ್ಮರಣ ಮಾತ್ರದಿಂದ ಅವನು ಭಾವಪರವಶನಾಗಿ ಕುಣಿದಾಡುತ್ತಾನೆ.

— ಶ್ರೀ ರಾಮಕೃಷ್ಣ

# ಹೆಸರಿನ ಹಂಬಲಿಕೆ

ನಿನ್ನ ಸ್ತುತಿಗೆ ಕಾರಣವಾಗುವಂಥ ನಿನ್ನ ಘನತೆಯ ಮಾತನ್ನು ನೀನು ಎಂದಿಗೂ ಆಡಬೇಡ. ನೀನು ಮಾಡಿದ ಒಂದು ಒಳ್ಳೆಯ ಕೆಲಸಕ್ಕಾಗಿ ನಿನಗೆ ಹೊಗಳಿಕೆ ಬಂದರೆ ಅದನ್ನು ಮರುಮಾತಾಡದೇ ಸ್ವೀಕರಿಸಿ ದೇವರಿಗೆ ಒಪ್ಪಿಸಿಬಿಡು. ಒಳ್ಳೆಯ ಕಾರ್ಯ ನಡೆಯುವುದಕ್ಕೆ ನೀನು ಸಾಧನವಾದೆ ಎನ್ನುವ ಸಮಾಧಾನ ನಿನಗಿರಲಿ. ನಿನ್ನನ್ನು ಸಾಧನವಾಗಿ ಮಾಡಿ ಕೊಂಡ ಬಗ್ಗೆ ದೇವರಿಗೆ ಕೃತಜ್ಞತೆಯನ್ನು ಅರ್ಪಿಸು.

ನಯ–ನೀತಿಯಿಂದ ನಡೆದು ನಿನಗಾಗಿ ಒಳ್ಳೆಯ ಹೆಸರನ್ನು ಗಳಿಸಿಕೋ. ಒಳ್ಳೆಯ ಹೆಸರಿನ ಮಾತು ಮನೆಯ ಹೊರಗಡೆಯಲ್ಲಿಯೇ ಉಳಿಯಲಿ. ಅದನ್ನು ನಿನ್ನ ಮನೆಯಲ್ಲಿ, ಮನಸ್ಸಿನಲ್ಲಿ ಎಂದೂ ತರಬೇಡ. ಉಳಿದವರು ಬೇಕಾದರೆ ಅದನ್ನು ತಮ್ಮ ಪ್ರಯೋಜನಕ್ಕಾಗಿ ಉಪಯೋಗಿಸಿಕೊಳ್ಳಲಿ. ನೀನು ಮಾತ್ರ ಅದನ್ನು ನಿನ್ನ ಹಿತಕ್ಕಾಗಿ ಬಳಸಿಕೊಳ್ಳಬೇಡ. ನಿನ್ನ ನೆರೆ–ಹೊರೆಯವರಿಗೆ ಇನ್ನೂ ಹೆಚ್ಚಿನ ಪ್ರಯೋಜನಗಳನ್ನು ತಂದು ಕೊಡಲು ಅದನ್ನು ಸಾಧನವಾಗಿ ತೆಗೆದುಕೊಳ್ಳು.

ನಿನ್ನ ಮುಖಕ್ಕೆ ಯಾವ ಕನ್ನಡಿಯೂ ಬೇಡ. ಅನ್ಯ ಜನರಿಗೆ ನಿನ್ನ ಮುಖವೇ ಕನ್ನಡಿಯಾಗಲಿ.

— ಜರಿಮಿೂ ಟೇಲರ್

# ಜೀವನದ ನಾಟಕಶಾಲೆ

ಐಶ್ವರ್ಯ ಅಧಿಕಾರ ಹಾಗೂ ಪ್ರಶಸ್ತಿಗಳನ್ನು ಸಂಪಾದಿಸುವಂಥ ಶಕ್ತಿ ಪ್ರತಿಯೊಬ್ಬನ ಆಧೀನದಲ್ಲಿ ಇಲ್ಲದೇ ಇದ್ದಿರಬಹುದು. ಆದರೂ ಒಳ್ಳೆಯವನಾಗಿ, ಔದಾರ್ಯವುಳ್ಳವನಾಗಿ, ಬುದ್ಧಿವಂತನಾಗಿ ಇರುವುದು ಪ್ರತಿಯೊಬ್ಬನಿಗೂ ಸಾಧ್ಯವಿದೆ. ನಮ್ಮ ಬಳಿಯಲ್ಲಿ ಏನಿದೆಯೋ ಅದು ನಿಜವಾದ ಸಂಪತ್ತಲ್ಲ. ನಾವು ಈಗ ಏನಿದ್ದೇವೆಯೋ, ಮುಂದೆ ಏನಾಗಬಲ್ಲೆವೋ ಅದೇ ನಿಜವಾದ ಸಂಪತ್ತು.

ಇಂದು ನಡೆದಿರುವುದು ಕೇವಲ ಒಂದು ನಾಟಕದ ಪ್ರದರ್ಶನ ಮಾತ್ರ. ಮನುಷ್ಯನ ವ್ಯಾಪಾರಗಳೆಲ್ಲ ರಂಗಕ್ಕೆ ಬಂದು ಆಟಕ್ಕೆ ನಿಂತಿವೆ. ಆಳುವವನು ಆಳಲ್ಪಡುವವನು, ಶ್ರೀಮಂತ ದರಿದ್ರ–ಈರೀತಿಯಾಗಿ ಪಾತ್ರರಚನೆಯಾಗಿದೆ. ಈ ದಿನ ಮುಗಿದ ಮೇಲೆ ನಾಟಕಕ್ಕೆ ತೆರೆ ಬೀಳುತ್ತದೆ. ಮುಖವಾಡೆಗಳೆಲ್ಲ ಕಳಚಿ ಬಿದ್ದುಹೋದಮೇಲೆ ಮನುಷ್ಯನ ನಿಜವಾದ ಬಣ್ಣ ಬೆಳಕಿಗೆ ಬರುತ್ತದೆ.

ಆಗ ಪ್ರತಿಯೊಬ್ಬನ ವಿಚಾರಣೆಯೂ ಆರಂಭವಾಗುವುದು. ಯಾವನೊಬ್ಬನ ಐಶ್ವರ್ಯ ಅಧಿಕಾರ ಅಥವಾ ಸ್ಥಾನಮಾನದ ಪ್ರಶ್ನೆ ಅಲ್ಲಿ ಬರುವುದಿಲ್ಲ. ಪ್ರತಿಯೊಬ್ಬ ಮನುಷ್ಯನನ್ನು ಆತನ ಕೃತಿಯಿಂದ ಅಳಿಯಲಾಗುವುದು. ಆ ಪರೀಕ್ಷೆಯಲ್ಲಿ ನಮ್ಮ ಕೃತಿ ನಿಲ್ಲುವ ರೀತಿಯಲ್ಲಿ ನಾವು ಈಗ ನಡೆದುಕೊಳ್ಳಬೇಕು.

— ಲಾರ್ಡ್ ಏವ್‌ಬರೀ

# ಹೃದಯದ ಒಡೆತನ

ನಮಗೆ ಯಾವಾಗಲೂ ರಕ್ಷಣೆ ಇವೆ. ಅದನ್ನು ತಿಳಿದು ನಾವು ಧೈರ್ಯವಾಗಿ ನಡೆದುಕೊಳ್ಳಬೇಕು.

ಎಷ್ಟೇ ಆಪತ್ತು ವಿಪತ್ತುಗಳು ಒದಗಿದರೂ, ಎಷ್ಟೇ ತಪ್ಪು ತಡೆಗಳು ಘಟಿಸಿದರೂ ತನ್ನದೆನ್ನುವುದೊಂದು ಈ ಜೀವನದಲ್ಲಿ ಇದೆಯೆಂದು ಯಾವನು ನಂಬುತ್ತಾನೆಯೋ ಅವನಿಗೆ ಜೀವನದ ಬಗ್ಗೆ ಧೈರ್ಯವಿದೆ, ಆಸೆ ಇದೆ. ಆ ವಿಶಿಷ್ಟ ನಂಬಿಗೆಯನ್ನು ಅಪಹರಿಸಿಕೊಂಡು ಹೋಗುವುದು ಯಾವ ಕಳ್ಳನಿಗೂ ಸಾಧ್ಯವಾಗಲಾರದು.

ನೋವು–ನರಳಿಕೆಯಲ್ಲಿಯೂ, ದುಃಖ–ದುಮ್ಮಾನದಲ್ಲಿಯೂ ಯಾವ ಮನುಷ್ಯನು ಧೈರ್ಯವಾಗಿ ನಿಂತು, "ನನ್ನನ್ನು ಕರೆದೊಯ್ಯುವ ಕೈಯೊಂದಿದೆ" ಎಂದು ಹೇಳಬಲ್ಲನೋ ಆ ಮನುಷ್ಯನಿಗೆ ಹೊಸ ಜೀವನವಿದೆ. ತನ್ನ ಹೃದಯದ ಒಡೆತನವನ್ನು ಪಡೆದವನೊಬ್ಬನೇ ಆ ಮಾತನ್ನು ಹೇಳಬಲ್ಲನು.

— ಸ್ವಾಮಿ ಪರಮಾನಂದ

# ಕ್ರಿಯಾತ್ಮಕ ವಿಶ್ವಾಸ

ಜೀವನದ ಸಮಸ್ಯೆಗಳನ್ನು ಎದುರಿಸಲಾಗದೆ ನಾವು ಹೊರಗಿನ ಸಹಾಯವನ್ನು ನಿರೀಕ್ಷಿಸುತ್ತ ನಿಂತಿದ್ದೇವೆ. ಬುದ್ಧಿವಂತರಾದ ಜನರು ಅವುಗಳಿಗೆ ಪರಿಹಾರವನ್ನು ತಮ್ಮ ಅಂತರಾತ್ಮದಲ್ಲಿಯೇ ಕಂಡುಕೊಳ್ಳುತ್ತಾರೆ. ಅಂತರಂಗದ ಅಧ್ಯಾತ್ಮ ಜೀವನದೊಂದಿಗೆ ಸಂಬಂಧ ಕಲ್ಪಿತವಾದರೆ ಬಾಹ್ಯವಾದ ಈ ಭೌತಿಕ ಜೀವನಕ್ಕೆ ಹೊಸ ಸೌಂದರ್ಯವೂ ಕಳೆಯೂ ಪ್ರಾಪ್ತವಾಗುವುದು. ಮನುಷ್ಯನ ಇವೆರಡೂ ಕ್ಷೇತ್ರಗಳು ಪರಸ್ಪರ ದೂರವಾಗಿರುವುದರಿಂದಲೇ ಜೀವನವು ಹೊರೆಯಾದಂತಾಗಿದೆ. ಅಂತರಂಗ ಹಾಗೂ ಬಾಹ್ಯ ಜೀವನಗಳಲ್ಲಿ ಸಾಮರಸ್ಯವೇರ್ಪಟ್ಟಾಗ ಜೀವನವು ಹೊರೆಯೆನ್ನುವ ಭಾವನೆ ಅಳಿದುಹೋಗುವುದು.

ವಿಶ್ವಾಸ ಹಾಗೂ ಇಚ್ಛಾ ಶಕ್ತಿಗಳು ಪ್ರಬಲವಾಗಿದ್ದರೆ ಪರ್ವತಗಳನ್ನು ಕಿತ್ತು ಇಡಬಹುದು. ಧೃಡ ವಿಶ್ವಾಸವಿರುವಲ್ಲಿ ಯಾವ ಬಂಧನ–ಬೇಡಿಗಳೂ ನಿಲ್ಲಲಾರವು. ವಿಶ್ವಾಸ ಬಲದಿಂದ ರೋಗಿಗಳು ಗುಣಹೊಂದಿದ್ದಾರೆ. ಕಾಲು ಕಳೆದುಕೊಂಡ ಹೆಳವರು ಮತ್ತೆ ನಡೆದಾಡಿದ್ದಾರೆ. ವಿಶ್ವಾಸವಿಲ್ಲದ ಜನಕ್ಕೆ ಏನು ಮಾಡಿ ಏನು ಪ್ರಯೋಜನವಿದೆ ? ನಿಷೇಧಾತ್ಮಕ ವಿಶ್ವಾಸವು ಯಾವ ಅದ್ಭುತಗಳನ್ನೂ ಮಾಡಿತೋರಿಸಲಾರದು. ಅವೆಲ್ಲವುಗಳಿಗೂ ಕ್ರಿಯಾತ್ಮಕ ವಿಶ್ವಾಸವೇ ಮೂಲವಾಗಿದೆ. ಇಂಥ ಶ್ರೀಮಂತ ವಿಶ್ವಾಸದಿಂದಲೇ ಜೀವನದ ಶ್ರೀಮಂತಿಕೆ ಹೆಚ್ಚುವುದು.

— ಸ್ವಾಮಿ ಪರಮಾನಂದ

# ದುಡಿಮೆಯ ಸಂಗೀತ

ಹಾಡಿಕೊಳ್ಳುತ್ತ ಉದ್ಯೋಗ ಮಾಡುವಂಥ ಮನುಷ್ಯ ನನಗೆ ಬೇಕು. ಆತನು ಕೈಕೊಂಡ ಕಾಯಕ ಯಾವುದಿದ್ದರೂ ಅದೇ ಕಾಯಕದಲ್ಲಿ ತೊಡಗಿದ ಜೋಲು ಮುಖದವನಿಗಿಂತ ಅವನ ಕೆಲಸ ಯಾವಾಗಲೂ ಮೇಲಾದದ್ದಿರುತ್ತದೆ. ಇತರರು ಮಾಡುವುದಕ್ಕಿಂತ ಅವನು ಚೆನ್ನಾಗಿಯೂ ಮಾಡುತ್ತಾನೆ. ಅಲ್ಲದೆ ಉಳಿದವರಿಗಿಂತ ಆತನ ದುಡಿಮೆಯ ಪ್ರಮಾಣವೂ ಹೆಚ್ಚು. ದೀರ್ಘ ಪರಿಶ್ರಮವನ್ನು ಅವನೊಬ್ಬನೇ ತಾಳಿಕೊಳ್ಳಬಲ್ಲನು.

ದುಡಿಮೆಯ ಸಂಗೀತವು ದುಗ್ಧಪಾನವಿದ್ದಂತೆ. ದುಡಿಮೆಯಲ್ಲಿ ಸಂಗೀತವನ್ನು ಹುಟ್ಟಿಸಿಕೊಳ್ಳಬಲ್ಲ ಮನುಷ್ಯನು ಎಂದೂ ದಣಿಯುವುದಿಲ್ಲ. ತಮ್ಮ ವೃತ್ತಗಳಲ್ಲಿ ಚಲಿಸುವ ನಕ್ಷತ್ರಗಳೂ ಕೂಡ ತಾಳಬದ್ಧವಾಗಿ ತಿರುಗುತ್ತವೆಯೆಂಬುದಾಗಿ ಹೇಳುತ್ತಾರೆ.

ಆಹ್ಲಾದಕತೆಯ ಶಕ್ತಿಯು ಅದ್ಭುತವಾದುದು. ಅದು ಯಾವ ಗಣಿತ–ಗುಣಿತಕ್ಕೂ ನಿಲುಕುವುದಿಲ್ಲ. ಕೈಕೊಂಡ ಕಾರ್ಯದಿಂದ ಸಂತತವಾದ ಪ್ರಯೋಜನ ಲಭಿಸಬೇಕೆನ್ನುವುದಾದರೆ ಅದರಲ್ಲಿ ಸೂರ್ಯ ರಶ್ಮಿಯ ಪ್ರಭೆಯನ್ನು ತಂದುಕೊಳ್ಳಬೇಕು. ಆನಂದವಿರುವಲ್ಲಿ ಔದಾರ್ಯವಿದೆ. ಪ್ರಕಾಶವಿರುವಲ್ಲಿ ಸೌಂದರ್ಯವಿದೆ.

— ಕಾರ್ಲಾಯಿಲ್

# ದೇವ-ದರ್ಶನ

ನಿನ್ನ ಅಲ್ಪ ಜ್ಞಾನದಿಂದ ನೀನು ಮೋಸ ಹೋಗಬೇಡ. ಪ್ರಪಂಚದ ಬೇರೆ ಬೇರೆ ದೇಶಗಳಲ್ಲಿ ಆಗಿ ಹೋದ ಜನಗಳ ಅನುಭವದ ವಿಷಯದಲ್ಲಿ ನಿನಗೆ ವಿಶ್ವಾಸ ಉಂಟಾಗಲಿ. "ದೇವರಿದ್ದಾನೆ" ಎಂದು ಅವರೆಲ್ಲರೂ ಒಕ್ಕೊರಲಿನಿಂದ ಸಾರಿದ್ದಾರೆ. ನಾನು ಆ ಬಗ್ಗೆ ನಿನಗೆ ಭರವಸೆ ಕೊಡುತ್ತೇನೆ.

ನೀನು ತಾಳ್ಮೆಯಿಂದ ಮುಂದಡಿಯನ್ನು ಇಡು. ದೇವರ ಬಗೆಗೆ ನಿನ್ನಲ್ಲಿ ವಿಶ್ವಾಸ ಬೆಳೆಯುತ್ತ ಸಾಗಲಿ. ನಿನ್ನ ತಿಳಿವಳಿಕೆ ಈ ಭಾವನೆಗೆ ವಿರೋಧ ವಾಗಿರಬಹುದು. ನಿನ್ನ ಸುತ್ತು ಮುತ್ತಲಿನ ವಾತಾವರಣವೂ ದೇವರ ಅಸ್ತಿತ್ವವನ್ನು ಒಪ್ಪಲಿಕ್ಕಿಲ್ಲ. ಆದರೂ ನಿನ್ನ ವಿಶ್ವಾಸ ಅಳಿಯದಂತೆ ಉಳಿಯು ವುದಾದರೆ ಒಂದು ದಿನ ಅದು ನಿನ್ನ ಕಣ್ಣೆದುರಿನ ಸತ್ಯವಾಗಿ ಪರಿಣಮಿಸು ತ್ತದೆ. ನಿನ್ನ ಮನಸ್ಸಾಕ್ಷಿಯಾಗಿ ಆವಿರ್ಭವಿಸುವ ಈ ಪರಮಾತ್ಮ ದರ್ಶನವು ನಿನ್ನನ್ನು ಕಾಪಾಡುವ ರಕ್ಷಾಕವಚವಾಗುವುದು.

— ಮಹಾತ್ಮಾ ಗಾಂಧಿ

# ಜೀವನದ ಧರ್ಮ

ನಿನ್ನ ದೇವರು ನಿನ್ನ ದೇವಾಲಯದಲ್ಲಿ ಮಾತ್ರವಿರಬಹುದು. ಆದರೆ ನನ್ನ ದೇವರು ಎಲ್ಲೆಡೆಯಲ್ಲಿಯೂ ಇರುವನು. ಇಡೀ ವಿಶ್ವವೇ ನನ್ನ ದೇವ ಮಂದಿರ. ನನ್ನ ಜೀವನವೇ ನನಗೆ ತೀರ್ಥ ಯಾತ್ರೆ.

ಜಗತ್ತಿಗೆಲ್ಲ ಇರುವ ಭಗವಂತ ಒಬ್ಬನೇ. ಅವನನ್ನು ಹುಡುಕಿಕೊಂಡು ನೀನು ಕಂಡಕಂಡೆಡೆ ಅಲೆಯಬೇಡ. ನಿನ್ನ ಆತ್ಮದಿಂದ ಬರುವ ಸತ್ಯದ ಕಿರುದನಿಯೇ ಭಗವಂತನ ಧ್ವನಿ. ಅದನ್ನು ಕೇಳುವ ಅಭ್ಯಾಸ ನೀನು ಮಾಡಬೇಕು.

ಸತ್ಯವನ್ನು ಎಂದಿಗೂ ಬಿಡಬೇಡ. ಪ್ರಸಂಗ ಬಿದ್ದರೆ ಅದಕ್ಕಾಗಿ ಜೀವ ಕೊಡಲು ಸಿದ್ಧನಾಗು. ಸತ್ಯದ ಪ್ರತಿಷ್ಠಾಪನೆಗೆ ಫಿರಂಗಿ ರಥಗಳ ಸೈನ್ಯ ಸನ್ನಾಹ ಬೇಕಾಗಿಲ್ಲ. ಸತ್ಯ ಧರ್ಮಗಳೂ, ಕತ್ತಿ ಕಠಾರಿಗಳೂ ಪರಸ್ಪರ ವಿರುದ್ಧ ತತ್ತ್ವಗಳು. ಬಲಪ್ರಯೋಗದಿಂದ ತನ್ನ ತತ್ತ್ವವನ್ನು ಸ್ಥಿರಪಡಿಸ ಬೇಕೆನ್ನುವ ಧರ್ಮ, ಧರ್ಮವೇ ಅಲ್ಲ.

ಸಾವು ಒಂದು ಸಲ ಮಾತ್ರ ಬರುತ್ತದೆ. ಸದಾ ಮೃತ್ಯುವಿಗಾಗಿ ಹೆದರುತ್ತ ಜೀವನದಲ್ಲಿ ಬದುಕಬೇಡ. ಇರುವಷ್ಟು ದಿನವೂ ಮನುಷ್ಯನಾಗಿ ಬಾಳು. ಭಾಗ್ಯವಂತರ ಭೋಗದಲ್ಲಿ ಪಾಲುಗಾರನಾಗುವುದಕ್ಕಿಂತ ಬಡವರ ದುಃಖದಲ್ಲಿ ಪಾಲುಗಾರನಾಗುವುದು ಮೇಲು. ಅಂತಃಕರಣದ ಮನಸ್ಸಿಲ್ಲ ದಿದ್ದರೆ ನಿನ್ನ ಸಂಪತ್ತಿನಿಂದೇನು ಫಲ?

— ಮೋಹನಸಿಂಗ

# ಶೀಲವೇ ಸರ್ವಸ್ವ

ಜೀವನಕ್ಕೆ ಒಂದೇ ಒಂದು ಅಗತ್ಯವಿದೆಯೆಂದು ಶಾಸ್ತ್ರಗಳು ಸಾರುತ್ತವೆ. ಜೀವನದ ಈ ಮಹಾಸಾಗರದಲ್ಲಿ ಪಯಣ ಹೊರಟಿರುವ ಪ್ರತಿಯೊಬ್ಬನೂ ಅದನ್ನು ತನ್ನ ಮನಸ್ಸಿನಲ್ಲಿ ಅಚ್ಚೊತ್ತಿದಂತೆ ಮೂಡಿಸಿಕೊಳ್ಳಬೇಕು.

ಮನುಷ್ಯನಿಗೆ ಹಣ ಮುಖ್ಯವಲ್ಲ, ಅಧಿಕಾರ ಮುಖ್ಯವಲ್ಲ, ಬುದ್ಧಿವಂತಿಕೆ ಮುಖ್ಯವಲ್ಲ, ಕೀರ್ತಿ ಮುಖ್ಯವಲ್ಲ, ಸ್ವಾತಂತ್ರ್ಯ ಮುಖ್ಯವಲ್ಲ, ಆರೋಗ್ಯವೂ ಮುಖ್ಯವಲ್ಲ. ಆದರೆ ಮುಖ್ಯವಾದುದು ಒಂದೇ—ಅದು ಮನುಷ್ಯನ ಶೀಲ. ನಮ್ಮನ್ನು ಸಂರಕ್ಷಿಸುವ ಶಕ್ತಿ ಅದೊಂದೇ !

ತಾನು ಒಳ್ಳೆಯವನಾಗದಿದ್ದರೂ ಕೆಟ್ಟವನಾಗುವುದಿಲ್ಲವೆಂದು ಮನುಷ್ಯನು ಹೇಳುವ ಮಾತಿನಲ್ಲಿ ವಿಶೇಷ ಅರ್ಥವಿಲ್ಲ. ಸರಿಪಡುವ ಪ್ರಯತ್ನ ನಡೆಯದಿದ್ದರೆ ಅವನು ಕೆಟ್ಟವರಿಗಿಂತಲೂ ಕನಿಷ್ಠನಾಗುತ್ತಾನೆ. ಮನುಷ್ಯನಲ್ಲಿರುವ ಪರೋಪಕಾರ ಬುದ್ಧಿಗೂ ಆರೈಕೆ ಬೇಕು. ಆರೈಕೆ ತಪ್ಪಿತೆಂದರೆ ಅದು ಕಾಲಕ್ರಮದಲ್ಲಿ ಕುಂಠಿತಗೊಂಡು ಹೋಗುವುದು.

ನಮ್ಮ ಶಕ್ತಿಯನ್ನು ಸಾವರಿಸಿಕೊಂಡು ನಾವು ಮುಂದೆ ಸಾಗೋಣ. ಮನುಷ್ಯರಂತೆ ಬಾಳಿ ಬದುಕಿ ಇಲ್ಲಿಂದ ನಾವು ಮನುಷ್ಯರಾಗಿ ತೆರಳಬೇಕಾಗಿದೆ. ಈ ಜಗತ್ತಿನಲ್ಲಿ ಬದುಕುವಂತೆ ನಮಗೆ ದೇವರ ಅನುಗ್ರಹವಾಗಿದೆ. ಇರುವಷ್ಟು ದಿನವೂ ನಾವು ಶೀಲ-ಸಂಪನ್ನರಾಗಿ ಬದುಕಬೇಕು.

— " ಶಾಂತಿಯ ವೇದಿಕೆ " ಯಿಂದ

# ಅಹಿಂಸೆಯ ಒರೆಗಲ್ಲು

ಅಹಿಂಸೆಯಲ್ಲಿ ಅಸೂಯೆಗೆ ಅವಕಾಶವಿಲ್ಲ. ಪರಿಸ್ಥಿತಿಯ ಒತ್ತಡದ ಫಲವಾಗಿ ಯಾವನಾದರೂ ಒಬ್ಬ ಮನುಷ್ಯನು ಒಂದು ಒಳ್ಳೆಯ ಕಾರ್ಯವನ್ನು ಮಾಡಬಹುದು. ಆದರೆ ಮಾನವ ಜಗತ್ತಿನ ಬಗ್ಗೆ ನಿಜವಾದ ಮಮತೆಯುಳ್ಳವನು ಸಂತತವೂ ಒಳ್ಳೆಯ ಕಾರ್ಯಗಳನ್ನೇ ಮಾಡುತ್ತ ಹೋಗುತ್ತಾನೆ. ಜಗತ್ತಿನಲ್ಲಿ ದೊಡ್ಡವರೆನಿಸಿಕೊಂಡ ಜನರು ಒಂದು ಸಣ್ಣ ಹೆಸರಿಗಾಗಿ, ಒಂದು ತುಣುಕು ಬಂಗಾರಕ್ಕಾಗಿ ಪರಸ್ಪರರನ್ನು ಅಸೂಯೆಯಿಂದ ಕಂಡಿದ್ದಾರೆ. ಹೃದಯದಲ್ಲಿ ಅಸೂಯೆ ನೆಲಸಿರುವವರೆಗೆ ಅಹಿಂಸೆ ಪರಿಪೂರ್ಣಸ್ಥಿತಿಯನ್ನು ಮುಟ್ಟಲಾರದು.

ಆಕಳಾಗಲಿ ಕುರಿಯಾಗಲಿ ಎಂದೂ ಮಾಂಸಾಹಾರ ಮಾಡುವುದಿಲ್ಲ. ಹಾಗೆಂದ ಮಾತ್ರಕ್ಕೆ ಅವು ಅಹಿಂಸಾವಾದಿಗಳಾದವೇ? ಯಾವನಾದರೂ ಒಬ್ಬ ಮೂರ್ಖನು ಇದನ್ನು ಅಥವಾ ಅದನ್ನು ತಿನ್ನದೇ ಇರಬಹುದು. ಅಷ್ಟರಿಂದಲೇ ಅವನಿಗೆ ಹುಲ್ಲು ತಿನ್ನುವ ದನಕ್ಕಿಂತ ಹೆಚ್ಚಿನ ಪದವಿ ಲಭಿಸಲಾರದು. ಯಾವ ಮನುಷ್ಯನು ಅನಾಥರನ್ನೂ ವಿಧವೆಯರನ್ನೂ ವಂಚಿಸಿ ಹಿಂಸೆಮಾಡುವನೋ, ಹಣಕ್ಕಾಗಿ ಬೇಕಾದ ಕೃಷ್ಣಕೃತ್ಯಗಳನ್ನು ಮಾಡಲು ಹಿಂದೆಮುಂದೆ ನೋಡುವುದಿಲ್ಲವೋ ಅವನು ಕೇವಲ ಹುಲ್ಲಿನ ಮೇಲೆಯೇ ಬದುಕಿದ್ದರೂ ಕಾಡುಮೃಗಕ್ಕಿಂತ ಕಡೆ. ಆದರೆ ಯಾವ ಮನುಷ್ಯನು ಯಾರ ವಿಷಯದಲ್ಲಿಯೂ ದುಷ್ಟಭಾವನೆ ತಳೆಯುವುದಿಲ್ಲವೋ, ಯಾವ ಮನುಷ್ಯನು ತನ್ನ ವೈರಿಯ ಉತ್ಕರ್ಷದಲ್ಲಿಯೂ ಆನಂದವನ್ನು ವ್ಯಕ್ತಗೊಳಿಸುತ್ತಾನೆಯೋ, ಅವನು ದಿನದಿನವೂ ಹಂದಿಯ ಮಾಂಸವನ್ನೇ ತಿಂದು ಬದುಕಿದರೂ ಮಹಾ ತಪಸ್ವಿ. ಆತನು ಗುರುಗಳ ಗುರು.

— ಸ್ವಾಮಿ ವಿವೇಕಾನಂದ

# ಕ್ಷಣಿಕ ಹಾಗೂ ಶಾಶ್ವತ

" ಭೋಗ, ಭಾಗ್ಯ, ಹಾಗೂ ಕೀರ್ತಿ "— ಮನುಷ್ಯರು ಜೀವನದಲ್ಲಿ ಅಪೇಕ್ಷಿಸುವ ವಸ್ತುಗಳನ್ನು ಕ್ರೋಢೀಕರಿಸಿ ಹೀಗೆ ಹೇಳಬಹುದು. ಅವುಗಳ ಬಗ್ಗೆ ಆಲೋಚನೆ ಆರಂಭವಾಯಿತೆಂದರೆ ಯಾರಿಗೂ ಮನಸ್ವಾಸ್ಥ್ಯ ಉಳಿಯುವುದಿಲ್ಲ.

ಜೀವನದಲ್ಲಿ ಏನೋ ಶಾಶ್ವತವಾದುದನ್ನು ಆಶ್ರಯಿಸಿದಂತೆ ಮನಸ್ಸು ಭೋಗದೊಂದಿಗೆ ಸಂಪೂರ್ಣ ತಾದಾತ್ಮ್ಯ ಹೊಂದಿಬಿಡುವುದು. ಭೋಗ ದಲ್ಲಿ ಭಾಗಿಯಾದವನಿಗೆ ಉಳಿದ ವಿಚಾರಗಳೊಂದೂ ರುಚಿಸಲಾರವು. ಭೋಗಲಾಲಸೆಯ ಹಿಂದೆಯೇ ದುಃಖ ನಡೆದು ಬರುತ್ತದೆ. ಪ್ರೇಮವು ಸದಾಕಾಲವೂ ಶಾಶ್ವತವಾದುದನ್ನೇ ಹಾರಯಿಸಬೇಕು. ಅದರಿಂದ ಮನ ಸ್ಸಿಗೆ ದುಃಖದೂರವಾದ ಚಿರಶಾಂತಿ ಲಭಿಸುವುದು. ನಮ್ಮೆಲ್ಲ ಬಯಕೆಗಳೂ ಅದನ್ನು ಪಡೆಯುವುದಕ್ಕಾಗಿಯೇ ಮೀಸಲಾಗಲಿ. ಹೊಸ ಹಾದಿಯನ್ನು ಹಿಡಿದರೆ ಮನಸ್ಸಿಗೆ ನಿಶ್ಚಯವಾಗಿಯೂ ಹೊಸತನ ಬರುತ್ತದೆ. ಆ ಧೈರ್ಯ ನಮ್ಮಲ್ಲಿದೆಯೇ ?

— ಸ್ಪಿನೋಝಾ

# ಸಮಾಧಾನ

ನಿನ್ನನ್ನು ಬಿಟ್ಟು ಶ್ರೀಮಂತನಾಗಿರುವುದಕ್ಕಿಂತಲೂ ನಿನಗೋಸುಗ ವಾಗಿ ನಾನು ಬಡವನಾಗಿಯೇ ಉಳಿಯಬಯಸುತ್ತೇನೆ.

ನೀನಿಲ್ಲದ ಸ್ವರ್ಗಕ್ಕೆ ಹೋಗುವುದಕ್ಕಿಂತಲೂ ನಿನ್ನೊಂದಿಗೆ ಈ ಭೂಮಿಯಮೇಲೆ ಬದುಕುವುದನ್ನೇ ನಾನು ಮೇಲೆಂದು ಬಗೆಯುತ್ತೇನೆ.

ನೀನು ಎಲ್ಲಿರುವೆಯೋ ಅದೇ ನನ್ನ ಸ್ವರ್ಗ. ನೀನು ಇಲ್ಲದಿರುವ ಸ್ಥಾನ ಸ್ವರ್ಗವಾಗಿದ್ದರೂ ನನಗದು ಮೃತ್ಯು, ನರಕ!

ನೀನೇ ನನ್ನ ಆಸೆ, ಆಶ್ರಯ, ನಂಬಿಕೆ–ಎಲ್ಲವೂ! ನಿನ್ನನ್ನುಳಿದು ನನಗೆ ಬೇರೆ ಯಾವ ವಿಶ್ವಾಸಿಕರೂ ಇಲ್ಲ.

ನನ್ನ ಬಯಕೆಯ ಆರಾಧ್ಯಮೂರ್ತಿ ನೀನಾಗಿರುವುದರಿಂದ ನಾನು ನಿನಗಾಗಿ ಕರೆಯುತ್ತಿದ್ದೇನೆ, ಕೂಗುತ್ತಿದ್ದೇನೆ, ರೋದಿಸುತ್ತಿದ್ದೇನೆ, ಪ್ರಾರ್ಥಿಸುತ್ತಿದ್ದೇನೆ.

— ಥಾಮಸ್ ಕೆಂಪಿಸ್

---

## ತಿದ್ದುಪಡೆ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೮ | ೧೨ | ಉತ್ಸಾಹದಿಂದೊಡಗೂಡಿದ | ಉತ್ಸಾಹದಿಂದೊಡಗೂಡದ |
| ೧೨ | ೨ | ಮೋಹಗಳಿಂದಲೂ | ಮೋಹಗಳಿಗಿಂತಲೂ |
| ೪೩ | ೧೫ | ಸದಾವಕಾಲವೂ | ಸದಾಕಾಲವೂ |
| ೫೨ | ೧೭ | ಜಾಜ್ವಲ್ಯಮಾನಪ್ರಭೆಯ | ಜಾಜ್ವಲ್ಯಮಾನಪ್ರಭೆಯು |
| ೬೫ | ೯ | ಕಾಮಪಿಶಾಸೆ | ಕಾಮಪಿಪಾಸೆ |

೪೯ನೆಯ ಪುಟದಲ್ಲಿ ಅಧುನಿಕ ಎಂಬುದಕ್ಕೆ ಬದಲಾಗಿ ಆಧುನಿಕ ಎಂದೂ, ೬೪ನೆಯ ಪುಟದಲ್ಲಿ ಆತ್ಮಾವೇ ಎಂದಿರುವಲ್ಲಿ ಆತ್ಮವೇ ಎಂದೂ, ಕುಗ್ಗಲಾರದು ಎಂದಿರುವಲ್ಲಿ ಕುಗ್ಗಬಾರದು ಎಂದೂ, ೭೦ನೆಯ ಪುಟದಲ್ಲಿ ಮನಷ್ಯರೆಲ್ಲ ಎಂದಿರುವಲ್ಲಿ ಮನುಷ್ಯರೆಲ್ಲ ಎಂದೂ ಓದಿಕೊಳ್ಳಬೇಕಾಗಿ ಬಿನ್ನಹ.

